# ಮೀರಾಬಾಯಿ ಸಾಧು

---

ಗ್ರಂಥಕರ್ತರು

ಎಂ. ಡಿ. ಶ್ರೀನಿವಾಸಯ್ಯಂಗಾರ್, ಬಿ.ಎ., ಬಿ.ಎಲ್.,

ಲಾಯರ್, ಮೈಸೂರು.

---

ಮೈಸೂರು :

ಕೃಷ್ಣರಾಜ ವಾಣೀವಿಲಾಸ ಪ್ರೆಸ್,

1924.

## ವಿಜ್ಞಾಪನೆ.

---

ಮಹಾಶಯ, ರಂಗದಲ್ಲಿ ಅಭಿನಯಿಸುವದಕ್ಕೆ ಅನುಕೂಲವಾಗುವ ರೀತಿಯಲ್ಲಿ ಈ ನಾಟಕವು ವಿರಚಿತವಾಗಿದೆ. ಈ ನೂತನ ರೀತಿಯಲ್ಲಿ ಉಂಟಾಗಬಹುದಾದ ಗುಣದೋಷಗಳು ಏನಾದರೂ ಕಂಡುಬಂದಲ್ಲಿ ತಮ್ಮ ಸರಳಸುಹೃದಯಕ್ಕೆ ಅನುಗುಣವಾಗಿ ಗ್ರಹಿಸಿ ಕ್ಷಮಿಸುವಿರೆಂದು ನಂಬಿರುವೆನು.

ಇತಿ,

ಎಂ. ಡಿ. ಶ್ರೀನಿವಾಸಯ್ಯಂಗಾರ್.

# ಪಾತ್ರಗಳು.

## ಪುರುಷ.

ಕುಂಭರಾಣ—ಮೇವಾಡದ ರಾಣ.

ಅಕ್ಬರ್—ದಿಳ್ಳಿ ಪಾದಷಾ.

ತಾನ್ ಸೇನ್—ಪಾದಷಾವಿನ ಆಸ್ಥಾನದ ಸಂಗೀತ ವಿದ್ವಾಂಸ.

ಕಾಲಾಪಹಡ್—ತಾನ್ ಸೇನ್ ಶಿಷ್ಯ.

ರಣಛೋಡ—ಕುಂಭರಾಣವಿನ ಸೇನಾಪತಿ.

ವೇಬರ್—ಸಾಧು ಹುಡುಗ.

ಜನಾರ್ಧನಶಾಸ್ತ್ರಿ—ತರ್ಕಪಂಡಿತ.

ಯಶೋಧರ ಪಂಡಿತ—ಕುಂಭನ ಆಸ್ಥಾನಪಂಡಿತ.

ಆನಂದರಾವ್—ಶ್ರೀಮಂತನಾಗಿದ್ದ ದಸ್ಯು.

ಸಾಧು—

ಯೋಗಾನಂದಮುನಿ.

ಭಾರ್ಗವ—ಇವರ ಶಿಷ್ಯ.

ಮುನಿಕುಮಾರ, ಭಿಕಾರಿ ಹುಡುಗ, ಬೈರಾಗಿಗಳು, ಗುರುಕುಲವಾಸದವರು.

ಶ್ರೀಕೃಷ್ಣ.

## ಸ್ತ್ರೀ.

ಮೀರಾಬಾಯಿ ಸಾಧು—ಕುಂಭನ ಹೆಂಡತಿ.

ಚಂಪೆ, ಚಮೇಲಿ—ಈಕೆಯ ಸಖಿಯರು.

ಧೊಂಡುಬಾಯಿ—ಜನಾರ್ದನಶಾಸ್ತ್ರಿಯ ಹೆಂಡತಿ.

ವ್ರಜವನಿತೆಯರು, ಗೋಪಸ್ತ್ರೀಯರು.

ರಾಧಾ.

# ಶುದ್ಧಾಶುದ್ಧ.

| ಅಶುದ್ಧ. | ಶುದ್ಧ. | ಪೇಜು. | ಸಂಖ್ಯೆ |
|---|---|---|---|
| ಉತ್ತವೊ | ಉತ್ತಮವೊ | 5 | 11 |
| ಜೀವನಕ್ಕೆ | ಜೀವಕ್ಕೆ | 6 | 23 |
| ಇಷು | ಇಷ್ಟು | 13 | 23 |
| ಸೃಷಿ | ಸೃಷ್ಟಿ | 17 | 8 |
| ಸಂತೋಪವು | ಸಂತೋಷವು | 17 | 14 |
| ಮತಬೇಧ | ಮತಭೇದ | 17 | 22 |
| ಮಾಡವದ್ದರಿಂದ | ಮಾಡುವದ್ದರಿಂದ | 18 | 3 |
| ಪ್ರೇಶಿಸುವನು | ಪ್ರವೇಶಿಸುವನು | 23 | 5 |
| ಸಮಾಪದಲ್ಲಲ್ಲಿ | ಸಮೀಪದಲ್ಲಿಲ್ಲ | 23 | 12 |
| ಪ್ರಭಾವಿಗೆ | ಪ್ರಭುವಿಗೆ | 24 | 9 |
| ಪ್ರಣದವನ್ನು | ಪ್ರಣಾದವನ್ನು | 28 | 6 |
| ರತ್ನಮಾಲಿಕ | ರತ್ನಮಾಲಿಕೆ | 29 | 22 |
| ತಿಳಿದಕೆಳ್ಳು | ತಿಳಿದುಕೊಳ್ಳು | 33 | 4 |
| ಅದಕ್ಕೆ ಏನೂ | ಅದಕ್ಕೇ ಏನೊ | 33 | 12 |
| ಏನುಸಾಗದೆ | ಏನೂ ಸಾಗದೆ | 33 | 12 |
| ಮತಬೇಧ | ಮತಭೇದ | 35 | 2 |
| ಪಾತ್ರಳಾದುದ | ಪಾತ್ರಳಾದುದು | 37 | 5 |
| ಅದರ್ಶಪಾಯುಳಾಗಿರುವಳು | ಆದರ್ಶಪ್ರಾಯಳಾಗಿಗುವಳು | 37 | 7 |
| ಜತೆಗೊಡಿ | ಜತೆಗೂಡಿ | 39 | 20 |
| ಪ್ಪೀಲು | ಪೀಲು | 41 | 13 |
| ಸದ್ಯಕ್ಕೆ | ಸಧ್ಯಕ್ಕೆ | 49 | 23 |
| ಬಿಳುವನು | ಬೀಳುವನು | 53 | 12 |
| ಸಾವರ್ಥ್ಯ | ಸಾಮರ್ಥ್ಯ | 62 | 6 |

|| ಶ್ರೀಃ ||

|| ಶ್ರೀನಿವಾಸಾಯನಮಃ ||

---

# ಮೀರಾಬಾಯಿ ಸಾಧು.

---

(ಸೂತ್ರಧಾರಿಯು ಪ್ರವೇಶಿಸುವನು)

ಸೂತ್ರಧಾರಿ—ವೃತ್ತ ||

ಶ್ರೀಕೃಷ್ಣಂ ಪರವಾಸುದೇವನಮಲಂ ನಾರಾಯಣಂ ಕೇಶವಂ ।
ಶ್ರೀಕೃಷ್ಣಂ ವರನಾರದಾದಿವಿನುತಂ ಸರ್ವೋತ್ತಮಂ ಮಾಧವಂ ||
ಶ್ರೀಕೃಷ್ಣಂ ಭವಬಂಧನಾಶನಿಪುಣಂ ಭಕ್ತಪ್ರಿಯಂ ಶ್ರೀಕರಂ ।
ಶ್ರೀಕೃಷ್ಣಂ ದಯೆಗೆಯ್ದು ಸರ್ವನರರಂ ರಕ್ಷಿಕ್ಕೆ ಸಂತೋಷದಿಂ ||

(ಸಭಿಕರಿಗೆ ಪುಷ್ಪಾಂಜಲಿಯನ್ನು ಸಮರ್ಪಿಸಿ ನಿಷ್ಕ್ರಮಿಸುವನು)

ತೆರೆಯು ಏಳುವುದು.

---

## ಪ್ರಥಮಾಂಕಂ.

### ೧ ನೇ ರಂಗ.

(ಮೇವಾಡದ ಸಮೀಪಸ್ಥವಾದ ಆರಾವಳಿ ಪರ್ವತ ಪ್ರದೇಶದಲ್ಲಿ—ಅಕ್ಬರ್, ೬೦ ವರ್ಷದ ವಯಸ್ಸಿನ ತಾನ್‌ಸೇನ್, ೬೧ ವರ್ಷದ ಕಾಲಾಪಹಡ್ ಪ್ರವೇಶಿಸುವರು).

ಅಕ್—ಕುಥವಾತವೇ ಮೊದಲಾದ ಅನೇಕ ರಾಜಪುತ್ರರ ಸಂಸ್ಥಾನಾಧಿಪತಿಗಳು ನಮ್ಮನ್ನು ಪ್ರತಿಭಟಿಸಲಾರದೆ ಸಾಮಂತರಾಗಿ ನಮಗೆ ಕಪ್ಪಕಾಣಿಕೆಗಳನ್ನು ಕೊಡಲು ಒಪ್ಪಿದರು. ಆದರೆ ಈ ಮೇವಾಡದ ಕುಂಭರಾಣಾನೂ, ಈ ರಾಥೋಡದ ರಣಧೀರನೂ ಇನ್ನೂ ನಮ್ಮ ಚಕ್ರಾಧಿಪತ್ಯಕ್ಕೆ ಒಳಗಾಗಿಲ್ಲ. ಈ ಉಭಯ ರಾಜಪುತ್ರರೂ ಧೀರೋದಾತ್ತರೂ, ಸಂಗ್ರಾಮಸಿಂಹರೂ, ಪ್ರಬಲಸಹಾಯಸಂಪತ್ತಿಯುಳ್ಳವರೂ ಆದುದರಿಂದ ಇವರೊಡನೆ ಪ್ರಕೃತದಲ್ಲಿ ಸಮರವು ಸೂಕ್ತವಲ್ಲವೆಂದು ತಿಳಿದು ಸಮಯೋಚಿತವಾಗಿ ಭೇದೋಪಾಯದಿಂದ ನಿಗ್ರಹಿಸಬೇಕೆಂದು ಇರುವೆವು. ಅದು ಅಲ್ಲದೆ ಇದುವರಿವಿಗೂ ಬಹಳವಾಗಿ ಯುದ್ಧಮಾಡಿ ಶ್ರಾಂತರೂ, ಸ್ವಗೃಹಾವಲೋಕನಾತುರರೂ ಆದ ನಮ್ಮ ಸೇನಾಜನರನ್ನು ಮರಳಿ ದೇಹಲಿ ನಗರಕ್ಕೆ ಕಳುಹಿಸಿಬಿಟ್ಟು ಪ್ರಣಿಧ್ಯರ್ಥವಾಗಿ ನಾವು ಮಾತ್ರ ನಿಂತೆವು. ಆದರೆ ಸಧ್ಯಕ್ಕೆ ಹೊಸ ಸೈನ್ಯವು ಬರುವವರಿವಿಗೂ ಕಾಲಯಾಪನೆಯೇ ಕಾರ್ಯಗೌರವವಾಗಿರುವುದು. ತಾನಸೇನ್, ಹೊತ್ತು ಹೋಗದು. ಒಂದು ಪದವನ್ನಾದರೂ ಹಾಡು.

ತಾನ್— ರಾಗ—ಆಹಿರಿ. ತಾಳ—ಏಕ.

(ಪ) ಮಹರಾಜ ಜಯಜಯ । ಹಿಂದೂಸ್ಥಾನ ಪ್ರಜಾನಿಕರ ಹೃದ
ಯಾಂಭೋಜ ಮಧುಕರ ‖

(ಅ) ಧೀರಮಹಾವೀರ ಜಗದೇಕಶೂರ ಮಾರಾಕಾರನೀರಸುಕುಮಾರ
ಪಾರಾವಾರಗಂಭೀರ ದೀನೋದ್ಧಾರ ಅಕ್ಬರ ‖

ಅಕ್—ತಾನಸೇನ್, ಇದೇನು ? ಆಹಿರಿ ರಾಗವನ್ನು ಸಂಧ್ಯಾಕಾಲದಲ್ಲಿ ಮೊದಲು ಹಾಡುತ್ತೀಯೆ ?

ತಾನ್—ಖುದಾವಂದ್ । ಆಹಿರಿಯೂ, ಹೈಂದವವೂ ನನಗೆ ಪ್ರಿಯವಾದ ರಾಗಗಳು. ಆದುದರಿಂದ ನಾನು ಗಾಯನ ಪ್ರಾರಂಭದ ವೇಳೆಯಲ್ಲಿ ಈ ರಾಗಗಳನ್ನು ಮೊದಲು ಹಾಡುತ್ತೇನೆ. ಆದರೆ ಆಹಿರಿಯನ್ನು

ಪ್ರಾತಃಕಾಲದಲ್ಲಿ ಹಾಡಿದರೆ ಅನ್ನವು ಹುಟ್ಟಿದೆಂದು ವಚನವಿರು ವದ್ದರಿಂದ ಹೈಂದವವನ್ನು ಬೆಳಗ್ಗೆಯೂ, ಆಹಿರಿಯನ್ನು ಸಾಯಂ ತರದಲ್ಲೂ ನೊದಲು ಹಾಡುತ್ತೇನೆ. ಈ ವಿಷಯದಲ್ಲಿ ನಮ್ಮ ಕಾಲಾಪಹಡ್‌ಗೆ ಪರಿಶ್ರಮವುಂಟು.

ಅಕ್—ಕಾಲಾಪಹಡ್, ಇದೇನು ಬಹು ಗೋಪ್ಯವಾಗಿರುವೆ? ನಿನಗೆ ಸಂಗೀತ ಬರುವುದೆಂದು ನನಗೆ ಹೇಳಲೇ ಬೇಡವೆ?

ಕಾಲಾ—ಬಾದಷಹರವರು ಮಾಫ್‌ಮಾಡಬೇಕು. ನಾಲ್ವತ್ತು ವರ್ಷಗಳ ಕೆಳಗೆ ನಾನು ಸಂಗೀತವನ್ನು ಹಾಡುತ್ತಲಿದ್ದೆನು. ಆದರೆ ನಾನು ಹಾಡುವುದು ನನಗೇ ಅರ್ಥವಾಗದೆ ಇದರ ಸ್ವರೂಪಜ್ಞಾನವನ್ನು ಪಡೆಯಬೇಕೆಂದು ಸಂಗೀತವನ್ನು ಬಿಟ್ಟು ಸಂಗೀತ ಸ್ವರೂಪಜ್ಞಾನದ ಧ್ಯಾನದಲ್ಲಿದ್ದೆನು. ಕಡೆಗೆ ಸ್ವರೂಪಜ್ಞಾನವನ್ನು ತಿಳಿಯಬೇಕಾದರೆ ಸಂಗೀತಜ್ಞಾನವು ಸಂಪೂರ್ಣವಾಗಿರಬೇಕೆಂದು ಗೊತ್ತಾಯಿತು. ಅಷ್ಟರಲ್ಲಿ ನನ್ನ ಪೂರ್ವದ ಸಂಗೀತಜ್ಞಾನವು ಪೂರ್ತಾ ಮರೆತು ಹೋದದ್ದರಿಂದ ಪುನಃ ಈ ತಾನ್‌ಸೇನ್ ಬಳಿ ಸಂಗೀತವನ್ನು ಈಗ ಎರಡು ವರ್ಷಗಳಿಂದ ಅಭ್ಯಾಸ ಮಾಡುತ್ತಲಿದ್ದೇನೆ. ಸಂಗೀತವನ್ನು ಚನ್ನಾಗಿ ಕಲಿತನಂತರ ತಮ್ಮಲ್ಲಿ ಅರಿಕೆಮಾಡಿಕೊಳ್ಳಬೇಕೆಂದಿದ್ದೆನು. ಕ್ಷಮಿಸಬೇಕು.

ಅಕ್—ಕ್ಷಮಿಸುವುದಕ್ಕೆ ನಿನ್ನಲ್ಲೇನು ತಪ್ಪು? ಈಗ ನಿನ್ನ ಸಂಗೀತಾಭ್ಯಾಸವು ಸಾಂಗವಾಯಿತೋ?

ಕಾಲಾ—ಗುರುಗಳವರನ್ನೇ ಕೇಳಬೇಕು.

ತಾನ್—ಶಿಷ್ಯನು ಕಷ್ಟಪಟ್ಟು ಅಭ್ಯಾಸ ಮಾಡುತ್ತಲಿದ್ದಾನೆ. ಪಾಂಡಿತ್ಯ ಬರುವವರಿವಿಗೆ ದೇವರು ದೀರ್ಘಾಯುಷ್ಯವನ್ನು ಎಲ್ಲರಿಗೂ ಕೊಡಬೇಕೆಂದು ಪ್ರಾರ್ಥಿಸುವೆನು.

(ತೆರೆಯಲ್ಲಿ ಗಾನವಾಗುವುದು. ಹಾಡುತ್ತ ಬೈರಾಗಿಯ ಹುಡುಗನೊಬ್ಬನು ಪ್ರವೇಶಿಸುವನು).

ಬೈರಾ— ರಾಗ—ಹಿಂದೂಸ್ಥಾನಿ ತೋಡಿ. ತಾಳ—ಚತುರಶ್ರ ಏಕ.

(ಪ) ಹೇ ಗಿರಿಧಾರೀ । ಪಾಹಿಮುರಾರೀ ॥ ನಂದಸದನಾನಂದ
ಕಾರೀ । ರಾಧಾಹೃದಯವಿಹಾರೀ ॥

(ಅ) ಹೇ ಕೃಪಾಜಲನಿಧೆ । ಕರಿಕರುಣಾಪಾರೀಣ । ಹೇ ಜಗ
ತ್ರಯಗುರೋ । ಗೋಪಾಲ ॥

ಅಕ್—(ಸ್ವಗತ) ಆಹಾ, ಹುಡುಗನು ಎಷ್ಟು ಮನೋಹರವಾಗಿ ಹಾಡುವನು (ಪ್ರಕಾಶ) ಭೇಟಾ, ನೀನು ಯಾರು ?

ಬೈರಾ—ಪ್ರಭೋ । ನಾನೊಬ್ಬ ಭಿಕಾರಿಯು. ನನ್ನನ್ನು ವೇಬರ್ ಎಂದು ಕರೆಯುವರು. ನನಗೆ ತಂದೆತಾಯಿಗಳ್ಯಾರೋ ತಿಳಿಯದು. ಹುಟ್ಟಿದಾಗಿನಿಂದಲೂ ಅನಾಥನಾಗಿ ಬೆಳೆದವನು.

ಅಕ್—ಹಾಗಲ್ಲ, ಪರಮಾತ್ಮನೊಬ್ಬನು ನಿನ್ನ ಭಾಗಕ್ಕಿರುವಾಗ ನೀನು ಸನಾಥನಲ್ಲದೆ ಅನಾಥನೆಂದಿಗೂ ಆಗಲಾರೆ. ಇನ್ನೊಂದು ಪದವನ್ನು ಹಾಡಿ ನಮ್ಮ ಮನಸ್ಸನ್ನು ಸಂತೋಷಗೊಳಿಸು.

ಬೈರಾ—ತಮ್ಮ ಸಂತೋಷ. (ಹಾಡುವನು).

ರಾಗ—ದೇಶ್ಯಕಮಾಚ್. ತಾಳ—ಚತುಶ್ರ ಏಕ.

(ಪ) ನಂದಗೋಪಬಾಲ । ಪಾಹಿಗೋಪಾಲ । ಭಕ್ತಹೃದಯ
ಲೋಲ ॥

(ಅ) ಭವತಾರಕನಾಮಾ । ಪಾವನಶ್ರೀಧಾಮ । ದೇವೇಶದೇಹಿಭ
ಕ್ತಿಸಂಪದಂ ॥

ಅಕ್—ಶಾಭಾಷ್, (ತಲೆದೂಗುತ ಕೈಲಿದ್ದ ಉಂಗುರವನ್ನು ಕೊಡುವುದಕ್ಕೆ ಕೈನೀಡುವನು).

ತಾನ್—ಖುದಾವಂದರವರು ಕ್ಷಮಿಸಬೇಕು. ಈ ಹುಡುನ ಸಂಗೀತದಲ್ಲಿ ಯಾವ ಪ್ರೌಢಿಮೆಯೂ ಕಾಣಿಸುವುದಿಲ್ಲ ಪಾಠಹೇಳಿದ ಗಿಣಿಯಂತೆ ಅಭ್ಯಾಸಬಲದಿಂದ ರಾಗವೂ ತಾಳವೂ ಸರಿಯಾಗಿರುವ ಹಾಗೆ ಕಾಣಿಸುತ್ತದೆ. ಹುಡುಗನಿಗೆ ಸ್ವರಜ್ಞಾನವೇ ಇಲ್ಲ. ಇಂಥವನಿಗೆ ಅಮೂಲ್ಯವಾದ ಉಂಗುರವನ್ನು ಕೊಟ್ಟು ಸನ್ಮಾನಮಾ

ದುಃಖದ್ದರಿಂದ ಆಸ್ಥಾನದ ವಿದ್ವಾಂಸರಿಗೆ ಅವಮಾನ ಮಾಡಿದ ಹಾಗಾಗುವುದು. ಸನ್ನಿಧಾನದ ಸಲಿಗೆಯಿಂದ ನಾನಾಡಿದ ಮಾತನ್ನು ಕ್ಷಮಿಸಿ ತಮ್ಮ ದಿವ್ಯಚಿತ್ತಕ್ಕೆ ಬಂದಂತೆ ಮಾಡಬಹುದು.

ಕಾಲಾ --ಅದೂ ಅಲ್ಲದೆ ಈ ಹುಡುಗನಿಗೆ ಸಂಗೀತಸ್ವರೂಪಜ್ಞಾನವು ಸಹಾ ಇಲ್ಲ. ನಮ್ಮ ತಾನಸೇನರವರ ಪ್ರಶ್ನ ಸಂಗೀತವನ್ನು ತಾವೊಂದು ಸಲ ಪರಾಂಬರಿಸಬೇಕೆಂದು ನನ್ನ ಪ್ರಾರ್ಥನೆ. ಆಗ ಪ್ರಭುಗಳ ದಿವ್ಯಚಿತ್ತಕ್ಕೆ ಸರ್ವವೂ ವೇದ್ಯವಾಗುವುದು. ಆ ಕುಮಾರನ ಮುಂದೆ ಈ ಭಿಕಾರಿಯು ಎಲ್ಲಿ? ಆತನಿಗೆ ದಖನ್ನಿನ ನವಾಬರು ಖಿಲ್ಲತ್ತನ್ನೂ ಬಾಲಸರಸ್ವತಿಯೆಂಬ ಬಿರುದನ್ನೂ ಸಹಾ ಕೊಟ್ಟಿರುವರು. ಆಗದವರು ಬಿರುದಿಗಿಂತ ಖಿಲ್ಲತ್ತು ಉತ್ತಮವೋ ಖಿಲ್ಲತ್ತಿಗಿಂತ ಬಿರುದು ಉತ್ತಮವೋ, ಎರಡೂ ಪ್ರಾಚೀನ, ಹೇಳಲಸಾಧ್ಯವೆಂದು ಅನ್ನುತ್ತಲಿದಾರ. ಅದು ಹೋಗಲಿ. ಸನ್ನಿಧಾನದ ಆಶ್ರಯದಲ್ಲಿರುವವರನ್ನು ಮುಂದಕ್ಕೆ ತರುವುದು ತಮಗೇನೆ ಸೇರಿದ್ದಾಗಿದೆ. ಕ್ಷಮಿಸಬೇಕು.

ಅಕ —(ನಗುತ್ತಾ) ನಿಮ್ಮ ಬಾಲಸರಸ್ವತಿಗೆ ಆಗಬೇಕಾದನ್ನು ಸಮಯೋಚಿತವಾಗಿ ಮಾಡೋಣ. ಪ್ರಕೃತದಲ್ಲಿ ಭಿಕಾರಿಯ ಸಂಗೀತವು ಬಹು ಮನೋಹರವಾಗಿದೆ. ಸಂಗೀತಕ್ಕೆ ಸುಖವೇ ಮುಖ್ಯವು. ಹಾಡಿದ ಮೇಲೆ ಅನುಭವಕ್ಕೆ ತಂದುಕೊಳ್ಳುವುದಕ್ಕಿಂತಲೂ ಅನುಭವಿಸಿಕೊಂಡು ಹಾಡುವುದೆ ಉತ್ತಮವೆಂಬುವುದು ನನ್ನ ಅಭಿಮತವು. ಅಯ್ಯಾ, ನಿನ್ನ ಸಂಗೀತಕ್ಕೆ ಮೆಚ್ಚಿದೆನು. ಇಗೋ. ಈ ಉಂಗುರವನ್ನು ಪಾರಿತೋಷಕವಾಗಿ ತೆಗೆದುಕೋ ?

ಬೈರಾ—ಮಹರಾಜ್, ಭಿಕಾರಿಗೆ ಈ ವಸ್ತುವೇಕೆ ? ಎರಡುಹಿಡಿ ಭಿಕ್ಷವು ಸಿಕ್ಕಿದರೆ ಸಾಕು. ಈ ಜೀವನಕ್ಕೆ ಎರಡು ಹೊತ್ತಿನ ಗ್ರಾಸವಾಗುವುದು.

ಅಕ್—ಇಷ್ಟು ಚಿಕ್ಕ ವಯಸ್ಸಿನಲ್ಲೇ ಈ ವಿಧವಾದ ಜ್ಞಾನವನ್ನು ಎಲ್ಲಿ ಪಡೆದೆ ?

ಬೈರಾ—ಮೀರಾಬಾಯಿ ಸಾಧುಯುವರಿಂದ.

ಅಕ್—ನಾನು ಕೇಳಿರುವ ಮೀರಾಬಾಯಿ ಎಂಬ ಹೆಸರುಳ್ಳವರು ಈ ಮೇವಾಡದ ಮಹಾರಾಣಿಯುವರಾಗಬೇಕು. ನೀನು ಹೇಳುವ ಈ ಮೀರಾಬಾಯಿ ಸಾಧು ಯಾರು ?

ಬೈರಾ—ಮೀರಾಬಾಯಿ ಸಾಧುಯುವರೆ ಮಹಾರಾಣಿ ಮೀರಾಬಾಯಿಯುವರು. ಭೂಸಂಪದಕ್ಕಿಂತಲೂ ಸ್ವೇಚ್ಛಾಹೃತ್ಸಂಪದವೇ ಸಾಧುಗಳಲ್ಲಿ ಗಣ್ಯವಾದುದರಿಂದ ಸಾಧುಬೃಂದವು ಮಹಾರಾಣಿ ಸಾಹೆಬ್ರಾಯುವರನ್ನು ಮೀರಾಬಾಯಿ ಸಾಧು ಎಂದು ಕರೆಯುವರು.

ಅಕ್—ಬಾಲಕನೇ, ಮೀರಾಬಾಯಿಯವರ ಸಚ್ಚಾರಿತ್ರ್ಯಯೂ, ಸಂಗೀತಪ್ರೌಢಿಮೆಯೂ, ಕವಿತಾಕೌಶಲವೂ, ಉದಾರ ಬುದ್ಧಿಯೂ, ಆರ್ಯಾವರ್ತದಲ್ಲೆಲ್ಲಾ ಹರಡಿದೆ. ಅವರನ್ನು ಒಂದು ಸಲ ದರ್ಶನ ಮಾಡಿ, ಅವರ ಸಂಗೀತವನ್ನೊಂದುಸಲ ಕೇಳಬೇಕೆಂದು ಬಹಳ ದಿನಗಳಿಂದಲೂ ಆಸೆಯುಳ್ಳವನಾಗಿರುವೆನು ಇದುವರೆವಿಗೂ ಉಪಾಯವು ಗೊತ್ತಾಗಲಿಲ್ಲ. ಈಗ ನೀನೊಂದು ಸಲ ಸಂದರ್ಭವನ್ನೊದಗಿಸಿಕೊಟ್ಟು, ನನ್ನನ್ನು ಕೃತಾರ್ಥನನ್ನಾಗಿ ಮಾಡುವ ಪುಣ್ಯವನ್ನು ಕಟ್ಟಿಕೋ ?

ಬೈರಾ—ಸ್ವಾಮಿ, ತಾವೇನೋ ದೊಡ್ಡ ಮನುಷ್ಯರಹಾಗೆ ಕಾಣಿಸುತ್ತೀರಿ. ಆದರೆ ತಮ್ಮದು ಸದುದ್ದೇಶವೋ ಅಲ್ಲವೋ ತಿಳಿಯುವುದು ಹೇಗೆ ?

ಅಕ್—ಭೇಟಾ, ನೀನು ಮನಸ್ಸಿನಲ್ಲಿ ಸಂಶಯುವನ್ನು ಬಿಡು. ನಮ್ಮ ಉದ್ದೇಶವು ಸದುದ್ದೇಶವು. ಆ ಮಹಾ ತಾಯಿಯು ಪಾದದರ್ಶನವನ್ನು ನಮಗೊಂದುಸಲ ಮಾಡಿಸಿಕೊಟ್ಟು ನಮ್ಮ ಜನ್ಮವನ್ನು ಸಾರ್ಥಕಗೊಳಿಸು.

ಬೈರಾ—ಆಗಬಹುದು. ಅಯ್ಯಾ, ನೀವುಗಳು ಸಾಧುಗಳ ವೇಷವನ್ನು ಹಾಕಿಕೊಂಡು ನನ್ನ ಜತೆಯಲ್ಲಿ ಬನ್ನಿ ? ನಿಮ್ಮನ್ನು ಮೇವಾಡದ ಕೋಟೆಯ ಹೊರಗೆ ಸಾಧುಗಳು ಮಾತ್ರ ಸ್ವೇಚ್ಛೆಯಾಗಿ ತಿರುಗಾಡಬಹುದಾದ ಮಾರ್ಗದಲ್ಲಿ ಬಿಟ್ಟು ನನಗೆ ಕಾರ್ಯಾಂತರವಿರುವದ್ದ

ರಿಂದ ಹೊರಟು ಹೋಗುತ್ತೇನೆ. ನಾನು ಮುಂದೆ ಹೇಳುವ ಕೆಲವು ಕುರುಹುಗಳನ್ನು ಜ್ಞಾಪಕದಲ್ಲಿಟ್ಟುಕೊಂಡಿದ್ದು ಕೋಟೆಯೊಳಗೆ ಪ್ರವೇಶಿಸಿ ನಿಮ್ಮ ಉದ್ದೇಶವನ್ನು ನೆರವೇರಿಸಿಕೊಳ್ಳಿ ? ನೀವು ಯಾರೆಂಬುದು ಮಾತ್ರ ಬಹಿರಂಗವಾಗದಂತೆ ಜಾಗರೂಕರಾಗಿರಬೇಕು ? ಇಲ್ಲದಿದ್ದರೆ ಮುಸಲ್ಮಾನರಿಗೆ ಕುಂಭಗಳಾಣಾವಿನಲ್ಲಿ ಉಳಿಗಾವಿಲ್ಲ. ಜಾಗ್ರತೆ ಮಾಡಿ ನನ್ನೊಡನೆ ಬನ್ನಿ ?

ಅಕ'— ಹಾಗೆಯೇ ಆಗಲಿ. (ಎಲ್ಲರೂ ಹೋಗುವರು).

ತೆರೆಯು ಬೀಳುವದು.

---

೨ ನೇ ರಂಗ.

(ಮೇವಾಡದಲ್ಲಿ ಜನಾರ್ದನಶಾಸ್ತ್ರಿಯ ಮನೆ. ಜನಾರ್ದನಶಾಸ್ತ್ರಿಯು ತಳ್ಳಗಿರುನು).

ಜನಾ — ಇಲ್ಲಿನೋಡಿ ಸ್ವಂತ ಊರನ್ನು ಬಿಟ್ಟು ಪರಸ್ಥಳದಲ್ಲಿ ಉದ್ಧಾರವಾಗ್ತೇನೆ ಎನ್ನಬೇಕಾದರೆ, ಇಲ್ಲ ಆಶ್ರಯವಿರಬೇಕು, ಇಲ್ಲ ಹಣವಿರಬೇಕು. ಇವೆರಡೂ ಇದ್ದರಂತೂ ಸರ್ವೋತ್ಕೃಷ್ಟವೇ ಆಯಿತು. ಇವೆರಡೂ ಇಲ್ಲದೆ ಇದ್ದರೆ ಪರಸ್ಥಳದಲ್ಲಿ ಪೇಚಾಡುವುದಕ್ಕಿಂತಲೂ ಸ್ವಸ್ಥಳದಲ್ಲಿ ಗಂಜಿಯನ್ನು ಕುಡಿದುಕೊಂಡಿರುವುದೇಲೇಸು. ನಮ್ಮೂರಲ್ಲಿ ನನ್ನನ್ನು ತರ್ಕಾಲಂಕಾರ ಶಿಖಾಮಣಿ ಜನಾರ್ದನ ಶಾಸ್ತ್ರಿಯೆಂದು ಕರೆಯುತ್ತಿದ್ದರು. ಈ ಊರಿಗೆ ಬಂದ ಮೇಲೆ ಇಲ್ಲಿನವರು ಅಜೆನಾಸ್ತಿಯೆಂದು ನನ್ನನ್ನು ಕೂಗುವುದಕ್ಕುಪಕ್ರಮಿಸಿದರು. ಏನೋ ಪಾಪ, ನನ್ನ ಹೆಸರು ಉಚ್ಚರಿಸುವುದಕ್ಕೆ ಸುಲಭವಲ್ಲ, ಆದ್ದರಿಂದ ನಾಮಸಲ್ಲಟ ಮಾಡಿ ಅಜೆನಾಸ್ತಿ ಎಂದು ಕರೆಯುತ್ತಿದ್ದಾರೆನೋ ಎಂದು ಸುಮ್ಮನೆ ಇದ್ದೆ. ಈ ದಿನ ಬೆಳಗ್ಯೆ ಬೀದೀಲಿ ಹೋಗುತ್ತಾ ಇರೋಣ, ಅಜೆನಾಸ್ತಿ ಹೋಗು

ತ್ತಾನೆ ಅಜಿನಾಸ್ತಿ, ನೋಡೋ ಎಂದು ಹುಡುಗರು ಕೂಗಿಕೊಂಡದ್ದನ್ನು ಕೇಳಿದೆನು. ಸ್ವಲ್ಪ ಯೋಚನೆ ಮಾಡಿದ್ದರಲ್ಲಿ ನಾವು ಸಲ್ಲಟವ್ರೊಂದಲ್ಲದೆ ಅರ್ಥವಿಲ್ಲಟವ್ರೂ ಸಹಾ ಆಗಿದೆಯೆಂದು ನನಗೆ ಜ್ಞಾನೋದಯವಾಯಿತು. ಅಜಿನ, ಅಸ್ತಿ ಅಂದರೆ ಚರ್ಮ, ಮೂಳೆ ಇವೆರಡೇ ಇರತಕ್ಕವನೆಂದು ನನಗೆ ಈ ಊರಿನವರು ನಾಮಕರಣ ಮಾಡಿದ್ದಾರೆ. ಈ ವಿಷಯವನ್ನು ತರ್ಕಮಾಡುತ್ತ ತರ್ಕಮಾಡುತ್ತ ನನಗೆ ಜಿಹ್ವಾಚಾಪಲ್ಯವೊಂದಂಟಿಕೊಂಡು ಮನೆಗೆ ಬಂದುಬಿಟ್ಟೆನು. ಏನು ಮಾಡುವುದು? ಜಿಹ್ವಾಚಾಪಲ್ಯವನ್ನು ನೋಡಿದರೆ ಜಠರಕ್ಕೆ ಸುಖವಿಲ್ಲ. ಜಠರಸುಖವನ್ನು ನೋಡಿದರೆ ಜಿಹ್ವಾಚಾಪಲ್ಯವು ತೀರುವುದಿಲ್ಲ. ಮಾಡುವುದೇನು? ಧೊಂಡುಬಾಯಿ, ಧೊಂಡು, ಇಲ್ಲಿಬಾ? ಬೇಗಬಾ?

**ಧೊಂಡುಬಾಯಿ**—(ದಪ್ಪನಾದ ಹೆಂಡತಿಯು ಪ್ರವೇಶಿಸಿ) ಉಸಿರಾಡುವುದಕ್ಕೆ ಸಹ ಅವಕಾಶ ಕೊಡದೆ ಇಷ್ಟು ತ್ವರಿತನಾಗಿ ನನ್ನನ್ನೇಕೆ ಕರೆದಿರಿ? ಕೂಗಿದ ಕೂಡಲೇ ತಟ್ಟನೆ ಬರುವುದಕ್ಕೆ ನನ್ನ ಕೈಲಾಗುವುದೆ?

**ಜನಾ**—ದಿನವೂ ನೋಡುತ್ತೇನಲ್ಲಾ ತಟ್ಟನೆ ಮಾಡುವ ಕೆಲಸವ್ಯಾವುದೂ ನಿನ್ನ ಕೈಲಾಗುವುದಿಲ್ಲ. ಯುಗ ಮರಳಬೇಕು. ನೀನೇನು ಮಾಡುತ್ತಲಿದ್ದೆ?

**ಧೊಂಡು**—ಆಲೋಚನೆ ಮಾಡುತ್ತಾ ಕೂತಿದ್ದೆ.

**ಜನಾ**—ಸರಿ. ಹಸಿವಾಗುತ್ತಲಿದೆ, ತಿನ್ನುವುದಕ್ಕೆ ಏನಾದರೂ ಉಂಟೋ?

**ಧೊಂಡು**—ನಿಮ್ಮ ಮಾತುಗಳು ನನ್ನ ಮಾತುಗಳು. ಇವೆರಡುಳಿದು ಇನ್ನೇನು ಇಲ್ಲ.

**ಜನಾ**—(ಸುಮ್ಮನೆ ನೋಡುವನು).

**ಧೊಂಡು**—ಸುಮ್ಮನೆ ನೋಡುತಿದ್ದರೆ ಏನಾದೀತು. ಸಂಸಾರದ ಪಥವು ನಡೆಯುವುದೆ? ನಮ್ಮ ಬಲತಾಯಿ ಕೃಷ್ಣಾಬಾಯಿಗೆ ಒಪ್ಪಿಡಿ ಅವಲಕ್ಕಿಕೊಟ್ಟು ಹೇಗೆ ಮಂಕುಮಾಡಿದಿರೋ ಕಾಣೆ, ನನ್ನನ್ನು ನಿಮ್ಮಂಥ ಕುಚೇಲನಿಗೆ ಲಗ್ನಮಾಡಿ ನನ್ನನ್ನೀಗತಿಗೆ ತಂದಳು.

ತಂದೆಯ ಮನೆಯಲ್ಲಿ ಸುಖವಾಗಿ ಬೆಳದಿದ್ದ ಚೊಕ್ಕಬೆಳ್ಳಿಯಂತಹ ನನ್ನ ಮೈಕರಗಿ ಕರತಾಳೆಯಾಗಿದೆಯೋ ?

ಜನಾ—ಧೊಂಡು ಎಷ್ಟು ಅಂದುಬಿಟ್ಟೆಯೆ, ಎಷ್ಟು ಅಂದುಬಿಟ್ಟೆಯೆ ? ನಿಜವಾಗಿಯೂ ನನ್ನ ಹತ್ತಿರ ಅಷ್ಟು ಕಷ್ಟವಾಗಿದ್ದರೆ ಹೀಗೆ ನಿನ್ನ ಮೈಯ್ಯು ಪುಟಕ್ಕೆ ಹಾಕಿದ ಊದಿದ ಬೆಳ್ಳಿಯಹಾಗೆ ರಾಜಿಸುತ್ತಲಿತ್ತೆ ?

ಧೊಂಡು—ಸಾಕಪ್ಪ ಸಾಕು, ನಿಮ್ಮೊಡನೆ ಕಾದಾಡಿ ನನಗೆ ಉಸಿರು ಕಟ್ಟುವ ಗತಿಗೆ ಬಂತು. ನಿಮ್ಮೊಡನೆ ಸಂಸಾರ ಮಾಡುವುದಕ್ಕಿಂತಲೂ ಪ್ರಾಣಬಿಡುವುದೇ ಲೇಸು. ಏನುಮಾಡಲಿ, ಅದು ಸಾಧ್ಯವಿಲ್ಲವಾಗಿದೆ ಎಲ್ಲಾದರೂ ಹೋಗಿ ಕೆರೆ, ಕೊಳ, ನದಿ, ಯಾವುದಾದರೂ ಬಂದರಲ್ಲಿ ಬಿದ್ದು ಪ್ರಾಣಬಿಡೋಣವೆಂದರೆ ಅಷ್ಟು ದೂರ ನಡೆಯುವುದಕ್ಕೆ ನನ್ನ ಕೈಲಿ ಆಗುವುದಿಲ್ಲ. ಕುದುರೆ ಗಾಡಿಯನ್ನಾದರೂ ಇಟ್ಟಿದ್ದೀರಾ, ನಾನು ಕುಳಿತುಕೊಂಡು ಅಲ್ಲಿಗೆ ಹೋಗುವದಕ್ಕೆ? ಮನೇ ಭಾವೀಲೇ ಬೀಳೋಣವೆಂದರೆ ಭಾವೀಲಿ ನೀರಿಲ್ಲ. ಇನ್ನರಡಾಳುದ್ದ ತೋಡಿಸಿ ನೀರು ಬರುವಹಾಗೆ ಮಾಡಿಸುವುದಕ್ಕೆ ನಿಮಗೆ ಚೈತನ್ಯವಿಲ್ಲ. ಬುಕಿಯನ್ನಾದರೂ ಹಚ್ಚಿಕೊಂಡು ಪ್ರಾಣಬಿಡೋಣನೆಂದರೆ ಚಿಕ್ಕಂದಿನಲ್ಲೂ ಬೆಂಕಿಯು ಸುಟ್ಟುಬಿಡುತ್ತೆಂದು ತಿಳದು, ಅದನ್ನು ಕಂಡರೆ ನನಗಾಗುವುದಿಲ್ಲ. ನಾನೇನುಮಾಡುವುದು. ನಿಮ್ಮನ್ನು ಕಟ್ಟಿಕೊಂಡು ಹೊಟ್ಟೆಗಿಲ್ಲದೆ ಸಾಯಬೇಕಾಗಿದೆ.

ಜನಾ—ಏನು ಮಾಡೋದು ಧೊಂಡು, ನೀನು ಹೊಟ್ಟೆಗಿಲ್ಲದೆ ಸಾಯುತ್ತಿರುವೆಯೆಂಬುವುದು ಎಲ್ಲರಿಗೂ ತಿಳಿದ ಅಂಶವೆ? ಹೋಗಲಿ ಧೊಂಡು ! ನಿನಗೆ ಕೋಪಬರದೆ ಇದ್ದರೆ ಒಂದು ಮನವಿಯನ್ನು ಹೇಳುತ್ತೇನೆ.

ಧೊಂಡು—ಏನು ?

ಜನಾ—ಶಾಸ್ತ್ರೋಕ್ತವಾಗಿ ಅಂಬೊಡೆಯನ್ನು ಮಾಡಿಸಿ ತಿನ್ನಬೇಕೆಂದು ಒಂದು ಚಾಪಲ್ಯವುಂಟಾಗಿದೆ.

ಧೊಂಡು—(ಹಿಗ್ಗಿ ಸ್ವಲ್ಪ ಹತ್ತಿರಕ್ಕೆ ಬಂದು) ಅಯ್ಯೋ! ಅಂಬೊಡೆಯೆಂದರೆ ನನಗೆ ಪ್ರಾಣ.

ಜನಾ—ನನಗದು ಚನ್ನಾಗಿ ಗೊತ್ತಿದೆಯೆ! ನಿನ್ನ ಜೀವವೂ ಅಂಬೊಡೆಯ ಜೀವವೂ ನೆನಸಿದ ಕಳ್ಳೆಯಲ್ಲಿ ಕೂತಿವೆ.

ಧೊಂಡು—ಅದಿರಲಿ. ಏನೊ ಶಾಸ್ತ್ರೋಕ್ತ ಅಂದರಲ್ಲಾ ಅಂಬೊಡೆಯಲ್ಲಿ ಶಾಸ್ತ್ರೋಕ್ತವೇನಿದೆ?

ಜನಾ—ಶಾಸ್ತ್ರೋಕ್ತವೆಂದರೆ ಪಾಕಶಾಸ್ತ್ರೋಕ್ತ. ಕಡಲೆ ಬೇಳೆಯನ್ನು ನೆನೆಹಾಕಿ, ಉಪ್ಪು, ಮೆಣಸಿನಕಾಯಿ, ಕೊತ್ತಂಬರಿ ಸೊಪ್ಪು, ತೆಂಗಿನ ತಿರುಳು ಇತ್ಯಾದಿಗಳನ್ನೆಲ್ಲಾ ಹಾಕಿ ಚನ್ನಾಗಿ ರುಬ್ಬಿ, ಕಾದೆಣ್ಣೆಯಲ್ಲಿ ಬಿಲ್ಲೆ ಬಿಲ್ಲೆಯಾಗಿ ಹಾಕಿ ಕರಿದು ತೆಗೆದರೆ ಶಾಸ್ತ್ರೋಕ್ತವಾಗುತ್ತೆ.

ಧೊಂಡು—ನಾಡಿದ್ದು ಮನೆಯಲ್ಲಿ ಹೆಚ್ಚುಗಟ್ಲೆ. ನೀವು ಸಾಮಾನು ಒದಗಿಸಿಕೊಂಡು ಬನ್ನಿ, ನಾಡಿದ್ದು ಮಾಡುತ್ತೇನೆ. ಮನೆಯಲ್ಲಿ ಮೇಯುವುದಕ್ಕೆ ಒಂದು ಹುಲ್ಲುಕಡ್ಡಿಯು ಸಹಾ ಇಲ್ಲ.

ಜನಾ—ನನ್ನ ಕೈಲಿ ಒಂದು ಕಾಸೂ ಇಲ್ಲವಲ್ಲೆ?

ಧೊಂಡು—ನಿಮ್ಮ ಗೋಳು ಇದ್ದೇ ಇದೆ. ಈ ಬಡತನ ನಾನು ತಡೆಯಲಾರೆ ಎಂದು ಎಷ್ಟು ಹೇಳಿದರೂ ನೀವು ಕೇಳುವುದಿಲ್ಲ. ಈಗಿನ ಕಾಲದಲ್ಲಿ ನಿಮ್ಮ ವಿದ್ಯವನ್ನಾರು ಕೇಳುವವರು, ಎಲ್ಲಿಯಾದರೂ ಹೋಗಿ ಯಾಚನೆಯನ್ನಾದರೂ ಮಾಡಿ ತನ್ನಿ.

ಜನಾ—ಧೊಂಡು, ನೀನು ನನ್ನನ್ನು ಕುಚೇಲ ಎಂದು ಕರೆದಿದ್ದಿಯಾ? ಒಪ್ಪಿಡಿ ಅವಲಕ್ಕಿಯನ್ನು ನಿಮ್ಮ ಬಲಶಾಯಿ ಕೃಷ್ಣಾಬಾಯಿಗೆ ಕೊಟ್ಟು ಪ್ರಾರ್ಥಿಸಿ ನಿನ್ನಂತಹ ಬೆಳ್ಳಿ ಮುದ್ದೆಯನ್ನು ಸಂಪಾದಿಸಿಕೊಂಡೆನು. ಇನ್ನೊಂದು ಸಲ ಚಿನ್ನದ ಮುದ್ದೆಯನ್ನೇ

ಯಾಚಿಸಬೇಕಾದರೆ ಬೃಂದಾವನವಾಸಿಯಾದ ಆ ಕೃಷ್ಣ ಪರಮಾತ್ಮನನ್ನು ಯಾಚಿಸುವೆನೆ ಹೊರ್ತು ಇನ್ನೇನು ಇಲ್ಲ. ನನಗೆ ಮನುಷ್ಯರ ಸಹವಾಸ ಸಾಕು.

ಧೊಂಡು—ಸರಿ, ಸರಿ, ನಿಮ್ಮ ಕೈಲಿ ಏನೂ ಆಗುವುದಿಲ್ಲ. ಅದಿರಲಿ ಅಂದ್ರೆ ಈಗ ಆಂಬೊಡೆಗೇನು ಮಾಡೋದು ?

ಜನಾ—ನೀನೇ ಹೇಳು ?

ಧೊಂಡು—(ಸ್ವಲ್ಪ ಯೋಚಿಸಿ) ನಾನೆಂಥ ಮಂಕು ಅಂದ್ರೆ. ನೀವು ಹೊರಗೆ ಹೋಗಿದ್ದಾಗ ಪರಸ್ಥಳದವನೊಬ್ಬ ನಮ್ಮ ಮನೆಗೆ ಬಂದಿದ್ದ. ಹಳ್ಳಿಯಲ್ಲಿ ಯಾರಿಗೊ ಲಗ್ನವನ್ನು ನಿಶ್ಚಯಿಸಬೇಕಾಗಿತ್ತಂತೆ. ಪಂಚಾಂಗವೆಲ್ಲೂ ಸಿಕ್ಕಲಿಲ್ಲವಂತೆ. ಆದ್ದರಿಂದ ನಮ್ಮ ಮನೆಗೆ ಬಂದು ಪಂಚಾಂಗವಿದೆಯೇನಮ್ಮ, ಏನುಬೇಕಾದರೂ ಖರೀದಿ ಕೊಡುವೆನು ಅಂದ, ನಮ್ಮ ಮನೆ ಗೋಡೇ ಮೇಲೆ ಗೂಟಕ್ಕೆ ಒಂದು ಪಂಚಾಂಗವು ನೇತುಹಾಕಿದ್ದನ್ನು ನೋಡಿ ನನಗೊಂದು ಯೋಚನೆ ಬಂತು. ಅರ್ಧರೂಪಾಯಿ ಕೊಟ್ಟರೆ ಆ ಪಂಚಾಂಗವನ್ನು ಅವನಿಗೆ ಕೊಡುತ್ತೇನೆಂದು ಹೇಳಿದೆ. ತೆಕ್ಕೊಳ್ಳಿ ಅಮ್ಮ ಎಂದು ಅವನು ಅಲ್ಲಿಟ್ಟಿದ್ದ ತವಡಿನ ಕುಕ್ಕೆಯಲ್ಲಿ ಹಣವನ್ನು ಹಾಕಿಬಿಟ್ಟು, ನಾನು ಕೊಡುವಷ್ಟರಲ್ಲಿಯೇ ತಾನೆ ಅವಸರದಿಂದ ಗೂಟಕ್ಕೆ ನೇತುಹಾಕಿದ್ದ ಪಂಚಾಂಗವನ್ನು ಎತ್ತಿಕೊಂಡು ಓಡಿಹೋದ. ನಿನ್ನೊಡನೆ ಕಾದಾಡುವುದರಲ್ಲಿ ಆ ಅರ್ಧರೂಪಾಯನ್ನು ಮರೆತು ಬಿಟ್ಟೆ. ತಾಳಿ, ಹೋಗಿ ತರುತ್ತೇನೆ. (ಹೋಗುವಳು)

ಜನಾ—ಚನ್ನಾಗಿ ಮಾಡಿದಳಲ್ಲ. ಮೂರು ವರ್ಷಕ್ಕೆ ಹಿಂದಿನ ಪಂಚಾಂಗ ಕಾಗದವೇತಕ್ಕಾದರೂ ಉಪಯೋಗವಾಗುವುದೆಂದು ಗೂಟದಲ್ಲಿ ನೇತುಹಾಕಿದ್ದೆ. ಒಳ್ಳೆ ಕೆಲಸ ಮಾಡಿದಳು. ಆ ಪಂಚಾಂಗವನ್ನಿಟ್ಟುಕೊಂಡು ಅವನೇನು ಲಗ್ನಮಾಡುತ್ತಾನೆಯೊ ನಾಬೇರೆ ಕಾಣೆ.

ಧೊಂಡು—(ಸಂಭ್ರಮದಿಂದ ಪ್ರವೇಶಿಸಿ) ಇಲ್ಲಿನೋಡಿ ಅಂದ್ರೆ ? ನಮ್ಮ ಪುಣ್ಯ ಚಿಲ್ಲರೆ ಇರಲಿಲ್ಲವೇನೋ ? ಅರ್ಧರೂಪಾಯಿಗೆ ಬದಲು ಒಂದು ರೂಪಾಯನ್ನು ಹಾಕಿಬಿಟ್ಟು ಹೋಗಿದ್ದಾನೆ.

ಜನಾ:—ಪುಣ್ಯವಲ್ಲದೆ ಏನು ? ಹೊಸ ಪಂಚಾಂಗಕ್ಕೆರಡಾಣೆ ಅದರಲ್ಲೂ ಮೂರು ವರ್ಷಕ್ಕೆ ಹಿಂದಿನ ಪಂಚಾಂಗಕ್ಕೆ ಮೂರು ಕಾಸು ಕೊಡುವವರಿಲ್ಲ. ಅಂಥಾದ್ದರಲ್ಲೂ ನೀನು ಎಂಟಾಣೆ ಹೇಳಿದ್ದೂ, ಅವನು ಒಂದು ರೂಪಾಯಿ ಕೊಟ್ಟದ್ದೂ ಬಹುಚೆನ್ನಾಯಿತು.

ಧೊಂಡು—ಈ ರೂಪಾಯಿ ತೆಗೆದುಕೊಂಡು ಪೇಟೆಗೆ ಹೋಗಿ ಸಾಮಾನು ತನ್ನಿ ನಮ್ಮ ಮನೆಯಲ್ಲಿ ಹೆಚ್ಚುಗಟ್ಲೆಯಿಲ್ಲವೇ ?

ಜನಾ—ನೀನು ಮೊದಲ್ಗೊಂಡು ನಮ್ಮ ಮನೆಯಲ್ಲಿ ಎಲ್ಲಾದ್ರೂ ಹೆಚ್ಚುಗಟ್ಲೆಯು ಯಾವತ್ತೂ ಇರುವುದು ಕೇಳಲೆ ನೀನು ಬಡತನ, ಬಾಯಿ,(ಬೆರಳು ಮಡಿಸುವನು.)

ಧೊಂಡು—ಅಯ್ಯೋ ಸಾಕು. ಹೊತ್ತಾಯಿತು ಹೋಗಿ. ಅಂಗಡಿ ಬಾಗಿಲೆಲ್ಲಾದರೂ ಹಾಕಿಬಿಟ್ಟಾರು. (ಹೊರಡುತ್ತಿರುವಲ್ಲಿ) ಆದಿರಲಿ, ನಿಮ್ಮಕ್ಕನ ಮಗಳು ಚಮೇಲಿಯನ್ನು ನಾಡಿದ್ದು ಊಟಕ್ಕೆಲ್ಲಾದರೂ ಕರೆದುಬಿಟ್ಟೀರಿ. ರಾಕ್ಷಸಿಯ ಹಾಗೆ ಅವಳೊಬ್ಬಳೇ ಎಲ್ಲವನ್ನೂ ಮೇದುಬಿಡುತ್ತಾಳೆ.

ಜನಾ—ಮೀರಾಬಾಯಿಯು ಮನೆಯಲ್ಲಿ ಮೃಷ್ಟಾನ್ನವನ್ನು ತಿನ್ನುವ ಚಮೇಲಿಯು ನಿನ್ನ ಒಣಕಲು ಅಂಬೊಡೆಗೆ ಬಾಯಿಬಿಟ್ಟು ಕಾದಿರುವಳೆ ? ನೀನು ಹೆದರಬೇಡ. ನಾನು ಅವಳನ್ನು ಕರೆಯುವುದಿಲ್ಲ. (ಇಬ್ಬರೂ ಹೋಗುವರು).

(ತೆರೆಯು ಏಳುವುದು ಅಥವಾ ಬೀಳುವುದು).

———

## ೩ ನೇ ರಂಗ.

(ಮೇವಾಡದ ಪಥದಲ್ಲಿ ಚಮೇಲಿಯು ಹಾಡುತ್ತ ಪ್ರವೇಶಿಸುವಳು. ಕೈನಲ್ಲಿ ಪುಷ್ಪಪಾತ್ರೆಯನ್ನು ಹಿಡಿದಿರುವಳು).

ಚಮೇಲಿ— ರಾಗ ಶಂಕರಾಭರಣ. ತಾಳ ಏಕ.

(ಪ) ಪಂಡಿತನಾದರೇನು ಖಂಡಿಸಬಲ್ಲನೆ ಎನ್ನ ||
(ಅ) ನಾರಿಯು ನಾಲಿಗೆಯು ಮೀರುವ ಜನರನು
ಯಾರನು ಕಾಣೆನು ಧಾರಿಣಿಯೊಳು ನಾಂ ||

ಚಂಪೆ—(ಎದುರುಕಡೆಯಿಂದ ಪ್ರವೇಶಿಸುವಳು).

ಚಮೇಲಿ—ಸಖಿ ಚಂಪಾ! ಇದೇನು ಒಬ್ಬಳೆ ಬರುತ್ತಿರುವೆ? ದೇವಿಯು ರೆಲ್ಲಿ?

ಚಂಪೆ—ಚಮೇಲಿ! ದೇವಿಯುರು ಗೋವರ್ಧನಧಾರಿಯ ಮಂದಿರದಲ್ಲಿ ಧ್ಯಾನಾರೂಢರಾಗಿ ಕುಳಿತಿರುವರು!

ಚಮೇಲಿ—ಅವರೊಬ್ಬರನ್ನೇ ಏತಕ್ಕೆ ಬಿಟ್ಟುಬಂದೆ?

ಚಂಪೆ—ಧ್ಯಾನದಲ್ಲಿ ತಾವು ಕುಳಿತಮೇಲೆ ಎಷ್ಟು ಹೊತ್ತಿಗೆ ಬಹಿರ್ಮು ಖರಾಗುವರೋ ತಿಳಿಯಲಾಗುವುದಿಲ್ಲವಾಗಿ, ತಾವೊಬ್ಬರೇ ಮಂದಿ ರದಲ್ಲಿರಲುಳ್ಳವರೆಂದೂ, ಯಾವ ಭಯಕ್ಕೂ ಕಾರಣವಿಲ್ಲವೆಂದೂ, ಆದುದರಿಂದ ನಾನು ಮನೆಗೆ ಹೋಗಬಹುದೆಂದೂ, ದೇವಿಯು ರು ಧ್ಯಾನಕ್ಕೆ ಕೂರುವುದಕ್ಕೆ ಮೊದಲೇ ಹೇಳಿದ್ದರು. ಆದರೂ ನಾನು ಅಲ್ಲೇ ಇದ್ದೆನು. ಧ್ಯಾನಕ್ಕೆ ಕುಳಿತ ದೇವಿಯುರು ಎಷ್ಟು ಹೊತ್ತಾದರೂ ಏಳಲಿಲ್ಲವಾಗಿ, ಏಳುವಷ್ಟರೊಳಗೆ ದೇವಿಯರಿಗೆ ಉಪಚಾರವಸ್ತುಗಳನ್ನು ಸಿದ್ಧಪಡಿಸಿ ಬರೋಣವೆಂದು ಹೊರ ಟೆನು.

ಚಮೇಲಿ—ಇಷು, ಧ್ಯಾನಕ್ಕೆ ಕಾರಣವೇನು?

ಚಂಪೆ—ಯಶೋಧರ ಪಂಡಿತನೊಡನೆ ವಿವಾದ ಮಾಡಬೇಕೆಂದು ಬೆಳಗ್ಗೆ ನೀನು ಹೊರಟುಹೋದೆಯಷ್ಟೆ. ಆಮೇಲೆ ದೇವಿಯುರು ಬಹಳ

ದಿವಸಗಳಿಂದಲೂ ಪೂಜಿಸುತ್ತಲಿದ್ದ ಗಂಧದ ಮರದಿಂದ ಮಾಡಿದ್ದ ಗೋವರ್ಧನಧಾರಿಯ ವಿಗ್ರಹವು ಸ್ವಸ್ಥಾನದಿಂದ ಇದ್ದಕ್ಕಿದ್ದ ಹಾಗೆ ಕೆಳಗೆಬಿದ್ದು ಭಿನ್ನವಾಗಿ ಹೋಯಿತು. ಆದರಿಂದ ದೇವಿಯರು ಖಿನ್ನರಾಗಿ ದೇವಸ್ಥಾನದಲ್ಲಿ ಧ್ಯಾನಮಾಡುವುದಕ್ಕೆ ಹೋದರು.

**ಚಮೇಲಿ**—ಮರದ ವಿಗ್ರಹವು ಒಡೆದು ಹೋದಮಾತ್ರಕ್ಕೆ ಇಷ್ಟು ಖಿನ್ನರಾಗುವುದಕ್ಕೆ ಕಾರಣವೇನು?

**ಚಂಪೆ**—ನೀನು ಹೊಸದಾಗಿ ದೇವಿಯರ ಪ್ರೇಷ್ಯವರ್ಗಕ್ಕೆ ಸೇರಿದವಳಾದುದರಿಂದ ವಿಚಾರವು ತಿಳಿಯದು. ದೇವಿಯರ ಖಿನ್ನತೆಗೆ ಕಾರಣವುಂಟು. ದೇವಿಯರು ಎಂಟು ವರ್ಷದ ಮಗುವಾಗಿ ತಂದೆಯ ಮನೆಯಲ್ಲಿದ್ದಾಗ ಒಂದು ದಿನ ಅತಿಥಿಯಾಗಿ ಸಾಧುವೊಬ್ಬನು ಬಂದನಂತೆ. ದೇವಿಯರ ತಂದೆಯಿಂದ ಸರ್ವ ಆತಿಥ್ಯವನ್ನೂ ಸ್ವೀಕರಿಸಿ ಸಂತುಷ್ಟನಾಗಿ, ಅಲ್ಲಿ ಓಡಾಡುತ್ತಲಿದ್ದ ದೇವಿಯರನ್ನು ನೋಡಿ ತನ್ನ ಜೋಳಿಗೆಯಿಂದ ಈ ಗೋವರ್ಧನಧಾರಿಯ ವಿಗ್ರಹವನ್ನು ಕೊಟ್ಟು, ಇದನ್ನು ಸರ್ವದಾ ನಿರ್ಮಲಭಕ್ತಿಯಿಂದ ಪೂಜಿಸುತ್ತಲಿದ್ದರೆ ದೇವಿಯರಿಗೆ ಸರ್ವಕ್ಷೇಮವುಂಟಾಗುವುದೆಂದೂ, ವಿಗ್ರಹವು ಯಾವ ಕಾರಣದಿಂದಾದರೂ ಭಿನ್ನವಾದದ್ದೇ ಆದರೆ ದೇವಿಯರಿಗೆ ದುಃಖಪ್ರಾಪ್ತಿಯಾಗುವುದೆಂದೂ, ಹೇಳಿ ಆಶೀರ್ವಾದ ಮಾಡಿ ಹೊರಟು ಹೋದನಂತೆ. ಅಂದಿನಿಂದ ದೇವಿಯರು ಎಡೆಬಿಡದೆ ಗೋವರ್ಧನಧಾರಿಯ ವಿಗ್ರಹವನ್ನು ಪೂಜಿಸುತ್ತಿರುವರು. ಈಗ ವಿಗ್ರಹವು ಮುರಿದುದರಿಂದ ತಮ್ಮ ಪ್ರೇಮಭಕ್ತಿಗೆ ವಿಘಾತವೂ, ದುಃಖಕ್ಕೆ ಕಾರಣವೂ ಆಯಿತೆಂದು ಖಿನ್ನರಾಗಿ ದೇವಮಂದಿರಕ್ಕೆ ಹೋದರು.

**ಚಮೇಲಿ**—ಸರಿಹೋಯಿತು. ವಿವಾದದಲ್ಲಿ ಯಶೋಧರಪಂಡಿತನನ್ನು ಸೋಲಿಸಿ ಮರಳಿ ಅಂತಃಪುರಕ್ಕೆ ಬಂದೆನು. ನೀವಿಬ್ಬರೂ ಇಲ್ಲದಿರುವುದನ್ನು ನೋಡಿ ಸ್ವಲ್ಪಹೊತ್ತು ಕಾದಿದ್ದೆನು. ನೀವು ಬರಲಿಲ್ಲವಾಗಿ ಮಂದಿರಕ್ಕೆ ಹೊರಟೆನು. ಅಷ್ಟು ದೂರ ಬರುವವಳಾ

ಮುದದಿಂದ ದೇವರಿಗೆ ಅರ್ಪಿಸಿ ಬರೋಣವೆಂದು ಈ ಪುಷ್ಪಗಳನ್ನು ತೆಗೆದುಕೊಂಡು ಹೊರಟೆನು. (ಪುಷ್ಪಪಾತ್ರೆಯನ್ನು ತೋರಿಸುತ್ತಿರುವಲ್ಲಿ ಅದು ಕೈತಪ್ಪಿ ಕೆಳಗೆ ಬಿದ್ದು ಪುಷ್ಪಗಳು ಚೆಲ್ಲಿ ಹೋಗುತ್ತವು).

ಚಂಪೆ—ಇದೊಂದು ಅಪಶಕುನವಾಯಿತು. ಏನಾಗುವುದೋ ಆ ಗೋವರ್ಧನಧಾರಿಯೇ ಬಲ್ಲನು.

ಚಮೇಲಿ—ದೇವರಿಗೆಂದು ತಂದ ಈ ಪುಷ್ಪಗಳನ್ನು ಯಾರಾದರೂ ಮಾರ್ಗಸ್ಥರು ತುಳಿದಾರು ಆರಿಸಿಕೊಳ್ಳೋಣ. ನಡೆನಡೆಯಲ್ಲಿ ಬಿದ್ದದ್ದರಿಂದ ದೇವರಿಗೆ ಸಮರ್ಪಿಸುವುದಕ್ಕೆ ಅಯೋಗ್ಯವು. (ಇಬ್ಬರೂ ಆರಿಸಿಕೊಳ್ಳುವರು).

(ಸಾಧು ವೇಷಧಾರಿಗಳಾದ ಅಕ್ಬರ್ ಮತ್ತು ತಾನ್‌ಸೇನ್ ಪ್ರವೇಶಿಸುವರು).

ತಾನ್—ಸಹೋದರನೆ, ಈಗ ನಾವು ಬಂದಿದ್ದ ಸ್ಥಳವು ಅಪರಿಚಿತ, ಶತ್ರುಮಯ ಜನರೋ? ಹುಡುಗನು ಹೇಳಿದ ದೇವಾಲಯವು ಎಲ್ಲಿರುವುದೋ ನಮಗೆ ತಿಳಿಯುವ ಬಗೆ ಹೇಗೆ? ಅವನು ನಮ್ಮ ಜತೆಯಲ್ಲಿದ್ದರೆ ಚೆನ್ನಾಗಿತ್ತು.

ಅಕ್—ಹುಡುಗನು ಹೇಳಿದ್ದ ಕುರುಹುಗಳಿಂದ ದೇವಾಲಯವು ಇಲ್ಲೇ ಸಮೀಪದಲ್ಲೆಲ್ಲೋ ಇರಬೇಕೆಂದು ತೋರುತ್ತೆ. ಸುಮ್ಮನಿರು. ಈ ಸ್ತ್ರೀಯರನ್ನೇ ಕೇಳಿ ತಿಳಿದುಕೊಳ್ಳೋಣ. (ಮುಂದೆ ಬಂದು) ಸಹೋದರಿಯರೇ, ಗೋವರ್ಧನಧಾರಿಯ ಮಂದಿರವು ಎಲ್ಲಿದೆ? ನಾವು ದೇವರ ದರ್ಶನವನ್ನು ಮಾಡಬೇಕು.

ಚಂಪೆ—ನಿಮ್ಮ ಮಾತುಗಳನ್ನು ಕೇಳಿದರೆ ಇಲ್ಲಿಗೆ ನೀವು ಹೊಸ ಜನರೆಂದು ತೋರುತ್ತೆ?

ಅಕ್—ನಿಜ.

ಚಂಪೆ—ಅದೋ, ಅಲ್ಲಿ ಕಾಣುವ ವಟವೃಕ್ಷದ ಸಮೀಪದಲ್ಲಿಯೇ ದೇವಾಲಯವಿದೆ.

ಅಕ್—ದೇವಸ್ಥಾನಕ್ಕೆ ಈಗ ನಾವು ಹೋಗಬಹುದೇ ?

ಚಂಪೆ—ಹೋಗಬಹುದು. ಆದರೆ—

ಅಕ್—ಸಂಶಯವೇನು ?

ಚಂಪೆ—ಏನೂ ಇಲ್ಲ. ದೇವಾಲಯದಲ್ಲಿ ಮಹಾರಾಣಿ ಮೀರಾಬಾಯಿಯವರು ಧ್ಯಾನದಲ್ಲಿ ಕುಳಿತಿರುವರು.

ಅಕ್—ಮೀರಾಬಾಯಿ ಸಾಧುವಿಗೆ ಸಾಧುಗಳಾದ ನಾವು ಪುತ್ರರಂತಾದುದರಿಂದ ಅವರ ದರ್ಶನವು ಅಲಭ್ಯವಲ್ಲ. ಏಕಕಾಲದಲ್ಲಿ ದೇವರದರ್ಶನವೂ, ಮಾತೆಯವರ ದರ್ಶನವೂ ನಮಗೆ ಸಂಭವಿಸಬೇಕಾದರೆ ನಾವು ಸುಕೃತಿಶಾಲಿಗಳೇ ಸರಿ. ನಿಮಗೆ ನಮ್ಮ ಧನ್ಯವಾದಗಳರಲಿ ಹೋಗುವೆವು. (ಹೋಗುವರು).

ಚಂಪೆ—ಸಖಿ, ದೇವಿಯರು ಧ್ಯಾನದಿಂದ ಬಹಿರ್ಮುಖವಾಗುವಷ್ಟರೊಳಗೆ ಅವರ ಉಪಚಾರ ಸಾಮಗ್ರಿಯಗಳನ್ನು ಸಿದ್ಧಪಡಿಸಿ ಬರೋಣಬಾ. (ಹೋಗುವರು).

ತೆರೆಯು ಏಳುವುದು.

---

೪ ನೇ ರಂಗ.

(ಗೋವರ್ಧನಧಾರಿಯ ಮಂದಿರದಲ್ಲಿ ದೇವರ ಮುಂದೆ ಮೀರಾಬಾಯಿಯು ಧ್ಯಾನಮಾಡುತ್ತಲಿರುವಳು. ಭಿಕಾರಿಯ ಹುಡುಗನೊಬ್ಬನು ಒಂದು ಕಡೆಯಲ್ಲಿ ಅರ್ಧನಿದ್ರಾವಸ್ಥೆಯಲ್ಲಿ ಮಲಗಿರುವನು. ದೀವಿಗೆಯು ಉರಿಯುತ್ತಿರುವುದು).

ವಿಾರಾ— ರಾಗ ಜುಂಜೋಟಿ. ತಾಳ ಛಾಪು.

(ಪ) ನಾಥಹರೆ ಜಗನ್ನಾಥಹರೆ । ಪಾಹಿಮುಕುಂದ ಗಿರಿಧಾರಿ ॥

(ಅ) ಕಮಲಾನಾಥ ಕಮಲಭವತಾತ ನಿಗಮಾಳಿಸಂಸ್ತುತ ಅಮರಾದಿ ಸೇವಿತ ॥

ದೇವ, ನಿನ್ನ ದಯಾರಸ ಪರಿಪೂರ್ಣವಾದ ಹೃದಯಕ್ಕೆ ತೋರಿದಂತೆ ಮಾಡುವೆ. ನನ್ನಿಂದೇನಾಗಬಲ್ಲದು.

(ನುರೆಯಲ್ಲಿ ಸಾಧುವೇಷದಿಂದ ಅಕ್ಬರ್ ಮತ್ತು ತಾನಸೇನ ಪ್ರವೇಶಿಸುವರು).

(ಚ) ಸೃಷ್ಟಿಸ್ಥಿತಿಲಯ ನಿಯಾಮಕ ಪಾಹಿಪರಾತ್ಪರ ಮುಕ್ತಿಪ್ರದಾಯಕ ದೇಹಿತವದಾಸ್ಯಂ ॥

(ದೇವರಿಗೆ ಪ್ರಣಾಮವನ್ನು ಮಾಡಿ ಮೀರಾಬಾಯಿಯು ಮುಂದೆ ಬರುವಳು. ಅಕ್ಬರ್ ಮತ್ತು ತಾನಸೇನ ಆಕೆಗೆ ನಮಸ್ಕರಿಸುವರು).

ವಿಾರಾ—ಅಯ್ಯ, ಈ ಪ್ರಣಾಮಕ್ಕೆ ಪಾತ್ರವು ಈ ದೀನಾತ್ಮವಲ್ಲ.

ಅಕ್—ಈ ದೀನಾತ್ಮನ ಬಂದು ದಿವ್ಯಕೀರ್ತನೆಯಿಂದ ನಮಗೆ ಪರಮಾತ್ಮನ ಪಾದಾರವಿಂದವು ಗೋಚರವಾಯಿತು.

ವಿಾರಾ—ಸಂತೋಷವು. ಅಕ್ಬರನಂತಹ ಭೂಮಂಡಲಾಧಿಪತಿಗಳೂ ಕಂಡು ಅರಿಯದ ಸಾಮ್ರಾಜ್ಯವನ್ನು ಆ ಪರಮಾತ್ಮನೇ ನಿಮಗೀಯಲಿ.

ಅಕ್—ಮಹಮ್ಮದೀಯನಿಗೆ ಇದು ಸಾಧ್ಯವಲ್ಲ.

ವಿಾರಾ—ಹಾಗಲ್ಲ. ದೇವರ ಸನ್ನಿಧಿಗೆ ಸಾವಿರಾರು ಮಾರ್ಗವುಂಟು.

ರಾಗ—ಹಿಂದೂಸ್ಥಾನಿ ಮಧ್ಯಮಾವತಿ. ತಾಳ—ಚಾಪು.

(ಪ) ಸಾವಿರಮಾರ್ಗವಿಹುದೈ ಗಿರಿಧರನನರಿತವಗೆ ॥

(ಅ) ಮತಭೇದರಹಿತನ ನತಜನಶುಭಕರನ ಪಾದಾಂಬುಜಕೆ ತನುಮನಧನದ ಭ್ರಮೆಯನುಳಿದ ಸಾಧುಜನಕೆ ॥

ಅಕ್—ಅಕ್ಬರನಿಗೆ ಇದು ಹೇಗೆ ಸಾಧ್ಯವು ?

ವಿರಾ—ದೃಶ್ಯಪದವಿಯು ಅದೃಶ್ಯವಾಗಿ, ಅದೃಶ್ಯಪದವಿಯಲ್ಲಿ ಅಧಿಕಾರ ಮಾಡುವುದರಿಂದ.

ಅಕ್—ಕಷ್ಟವು, ಕಷ್ಟವು.

ವಿರಾ—ಪರಕೀಯನಿಗಾಗಿ ನೀನು ಪಡುವ ಈ ವ್ಯಸನವೇ ನಿನಗೆ ದಾರಿಗೊಡುವುದು.

ತಾನ್—ಈತನು ಪೂರ್ವದಲ್ಲಿ ಒಬ್ಬ ರಾಜನು.

ವಿರಾ—ನಾವೆಲ್ಲರೂ ಒಂದಾನೊಂದು ಜನ್ಮದಲ್ಲಿ ರಾಜನೋ ರಾಣಿಯೋ ಆಗಿಯೇ ಇರುವೆವು. ಅದೊಂದು ಬಹಳ ಕಷ್ಟವಾದ ದುರಭ್ಯಾಸವೆಂದು ಹೇಳಬೇಕು. ಮನುಷ್ಯನಿಗೆ ಶಕ್ತಿಯೇ ದೌರ್ಬಲ್ಯವು. ಸಂಪದವೇ ದಾರಿದ್ರ್ಯವು.

ತಾನ್—ಮಹಾರಾಣಿಯವರು ಇವುಗಳಿಂದ ವಿಮುಕ್ತರೆಂದು ಪ್ರಸಿದ್ಧಿ.

ವಿರಾ—ಹಾಗೆ ಕರೆಯಕೂಡದು. ಇಲ್ಲಿ ಎಲ್ಲರೂ ಸಮಾನರು. ಇಲ್ಲಿ ಮಹಾರಾಣಿ, ರಾಣಿ ಎಂದು ಮುಂತಾದ ತಾರತಮ್ಯವಿಲ್ಲ. ರಾಜಾಸ್ಥಾನದಲ್ಲಿ ಕಿರೀಟವನ್ನು ಧರಿಸಿ ಆಳಿದವರೂ ಈ ಕೃಷ್ಣ ಪರಮಾತ್ಮನ ಸನ್ನಿಧಿಯಲ್ಲಿ ನಾನೊಬ್ಬ ಊಳಿಗವನ್ನು ಮಾಡುವ ದಾಸಿಯು. ಯಾರು ಈ ಗೋವರ್ಧನಧಾರಿಯ ಸೇವೆಯನ್ನು ನಿರ್ಮಲ ನಿಷ್ಕಲಭಕ್ತಿಯಿಂದ ಮಾಡುವರೋ ಅವರಿಗೆ ಫಲವಿದ್ದೇ ಇರುವುದು.

ಅಕ್—ಮೃತ್ತಿಕೆಯ ಸಂಬಂಧವಾದ ಸಿಂಹಾಸನಾಧಿಪತಿಗಳಿಗೆ ಇದು ಸಾಧ್ಯವಿಲ್ಲದ್ದು.

ವಿರಾ—ನಿನ್ನ ಪೂರ್ವಜನ್ಮದ ವಾಸನೆಯು ನಿನ್ನನ್ನು ಹೀಗೆ ಹೇಳಿಸುವದು.

ಅಕ್—ನಿಮ್ಮ ಮಾತನ್ನೆ ಪುನಃ ಉಚ್ಚರಿಸಿದೆನು. ಕೇವಲ ಮಾನವರಿಗೆ ಅಸಾಧ್ಯವಾದ ಒಂದು ಸಾಮ್ರಾಜ್ಯವನ್ನು ನೀವು ಸ್ಥಾಪಿಸಿರು

ವಿರಿ. ನಿಮ್ಮ ಕೀರ್ತಿಯು ಜಗನ್ಮಯವಾಯಿತು. ನನ್ನ ಇಷ್ಟವು ನೆರವೇರುವ ಹಾಗಿದ್ದಲ್ಲಿ ಈ ಭೂಮಂಡಲದ ಏಕಚಕ್ರಾಧಿಪತ್ಯ ವನ್ನೇ ನಿಮ್ಮ ಚರಣಾರವಿಂದಗಳಲ್ಲಿ ಸಮರ್ಪಿಸುತ್ತಲಿದ್ದೆನು.

ಮೀರಾ—ನನಗದು ಅನವಶ್ಯವು.

ಅಕ್—ನೀವೇ ಧನ್ಯರು, ನೀವೇ ಮಾನ್ಯರು, ನಿಮ್ಮ ಪೂಜ್ಯಬುದ್ಧಿಯು ನಮ್ಮನ್ನು ಪುನೀತರನ್ನಾಗಿ ಮಾಡಿತು. ನಮ್ಮ ಅಭಿಷ್ಟವು ಅಲ ಭ್ಯವಾದ ಮೇಲೆ ಪ್ರಕೃತೋಚಿತವಾಗಿ ನಮಗೆ ತೋರುವ ಈ ಅಲ್ಪವನ್ನು ನಮಗೋಸ್ಕರವಾಗಿ ಈ ಮುರಳಿಧರನಿಗೆ ನೀವೆ ಸಮರ್ಪಿಸಬೇಕು.

ಮೀರಾ—ಭಕ್ತಿಯಿಂದ ಕೊಟ್ಟರೆ ಅಲ್ಪವನ್ನಾದರೂ ಪರಮಾತ್ಮನು ಸ್ವೀ ಕರಿಸುವನು. ಸರ್ವಸ್ವವೂ ಅವನದಾಗಿರುವಲ್ಲಿ ದೊಡ್ಡದೇನು, ಚಿಕ್ಕದೇನು, ಎಲ್ಲವೂ ಅವನಿಗೆ ಸಮವು; ಭಕ್ತಿಯೇ ಮುಖ್ಯವು.

ತಾನ್—ಹಾಗಾದರೆ ಈ ಪುಷ್ಪಹಾರವನ್ನು ಆತನಿಗಾಗಿ ನೀವು ಸ್ವೀಕರಿಸ ಬೇಕು. ಪುಷ್ಪವು ಅವನದೆ.

ಅಕ್—ಹಾಗಾದರೆ ಈ ತುಲಸೀ ಹಾರವನ್ನು ಆತನಿಗಾಗಿ ನೀವು ಸ್ವೀಕರಿಸ ಬೇಕು. ತುಲಸಿಯು ಅವನದೆ.

(ಮೀರಾವು ಕಣ್ಣು ಮುಚ್ಚಿಕೊಂಡೇ ಕೈನೀಡುವಳು. ಅಕ್ಬರನು ರತ್ನಹಾರವನ್ನೂ ತಾನಸೇನ ಪುಷ್ಪಹಾರವನ್ನೂ ಹಾಕುವರು. ಹಾಗೆಯೇ ಮೀರಾ ಹಿಂತಿರುಗುವಳು. ತಾನಸೇನಗೆ ಸನ್ನೆ ಮಾಡಿ ಅಕ್ಬರನು ಕರೆದು ಕೊಂಡು ಹೋಗುವನು).

ಮೀರಾ— ರಾಗ—ಅಸಾವೇರಿ. ತಾಳ—ರೂಪಕ.

ಸ್ವೀಕರಿಸೈ ಕರುಣಾಳು ಮಂದರಧಾರಿ ‖ ಪ ‖

ಅವ್ಯಾಜ ಕರುಣಾಮೂರ್ತೆ । ನಿನ್ನಯ ಚರಣದಲಿ । ಪ್ರೇಮದೆ
ಅರ್ಪಿಸಿಹ | ಉಪಾಯನವೀಗ ‖

(ಕಣ್ತೆರೆದು ನೋಡಿ) ಆಶ್ಚರ್ಯವು, ಆಶ್ಚರ್ಯವು! ಸಾಧುಸಹೋದರರೆ ನಿಮ್ಮ ಪ್ರೇಮ ಭಕ್ತಿಗೆ ಪುರಸ್ಕಾರವನ್ನು ನೋಡಿ ? ನಿಮ್ಮ ತುಲಸೀ ಮಾಲೆಯು ಅಮೂಲ್ಯವಾದ ನವರತ್ನಮಾಲಿಕೆಯಾಗಿ ಮಾಡಲ್ಪಟ್ಟದೆ. (ಸುತ್ತಲೂ ನೋಡಿ) ಆ ಪುಣ್ಯಾತ್ಮರಾದ ಭಕ್ತರು ಹೊರಟೇ ಹೋದರು. (ಹಾರವನ್ನು ನೋಡುತ್ತ) ಗೋವರ್ಧನಧಾರಿಯು ಭಕ್ತಪರಾಧೀನತೆಯನ್ನು ಎಷ್ಟೆಂದು ಹೇಳುವದಕ್ಕೆ ಸಾಧ್ಯವು ? ಅವನಿಗಾಗಿ ಕೊಟ್ಟ ಹಾರವನ್ನು ಅವನಿಗೆಯೇ ಸಮರ್ಪಿಸುವೆನು.

(ಹಾರವನ್ನು ತೆಗೆದುಕೊಂಡು ದೇವರ ಸಮೀಪಕ್ಕೆ ಹೋಗುವಳು).

ತೆರೆಯು ಬೀಳುವುದು.

---

೫ ನೇ ರಂಗ.

(ಸ್ನಾನಮಾಡಿ ಮಡಿಯುಟ್ಟ ಜನಾರ್ಧನ ಶಾಸ್ತ್ರಿಯು ಮನೆಯಲ್ಲಿ ಪ್ರವೇಶಿಸುವನು).

ಜನಾ—ಕಳ್ಳೆಯ ಮಹಾತ್ಮ್ಯ ಎಂಥಾದ್ದು ಎನ್ನುತ್ತೀರಿ. ತಿಂದು ತಿಳಿದುಕೊಳ್ಳಬೇಕಾದರೆ ಒಂದು ಮಧ್ಯಾಹ್ನವಾಗಬೇಕು. ತರ್ಕಶಾಸ್ತ್ರವೋ ? ಮಹಮ್ಮೇರಿ, ಮಹಮ್ಮೇರಿ. ಇಂಥಾ ಕಡ್ಲೆಯನ್ನು ಇಂಥಾ ತರ್ಕಶಾಸ್ತ್ರದ ಬಾಂಡ್ಲಿಯಲ್ಲಿ ಹಾಕಿ ಹುರಿದರೆ ಅದರ ಮಹತ್ವ ಹೇಗಾಗುತ್ತಿಯೋ ? ಕಡ್ಲೆ ಎನ್ನುವದು ಹೀಗೇತಕ್ಕೆ ಉಬ್ಬರದಿಂದ ಹಿಗ್ಗುತ್ತಾ ಇದೆಯೆಂದು ಯೋಚಿಸುತ್ತಾ ಕುಳಿತೆ, ತಿಳಿಯಿತು ಏನು ಅನ್ನುತ್ತೀರೋ ? (ಜುಟ್ಟ ಮಡಿಸುವನು) ಸಂಕ್ರಾಂತಿಯಲ್ಲಿ ಎಳ್ಳಿನೊಳಗೆ ಹುರಿದ ಕಳ್ಳೇಬೇಳೆ; ಶ್ರೀರಾಮನವಮಿಯಲ್ಲಿ ನೆನೆಹಾಕಿದ ಕಳ್ಳೇಬೇಳೆ, ಗಣೇಶನ ಹಬ್ಬದಲ್ಲಿ ಕಳ್ಳೆಹಿಟ್ಟು, ನವರಾತ್ರಿ ಪಾಡ್ಯದಲ್ಲಿ ಕಳ್ಳೆ ಬೀಬ್ಬಟ್ಟು, ಕಾರ್ತೀಕಮಾಸದ ಆನೆಹಬ್ಬದಲ್ಲಿ ನೆನಸಿದ ದುಂಡುಕಳ್ಳೆ, ಹೀಗೆ ಹಬ್ಬಗಳಲ್ಲಿ ತನ್ನನ್ನೇ ದೇವರಿಗೆ ನೈವೇದ್ಯ ಮಾಡುತ್ತಾರಲ್ಲ, ಆದ್ದರಿಂದ ತಾನೇ

ಸರ್ವೋತ್ತಮನು ಎಂದೂ, ಮತ್ತು ಪ್ರತಿಸಿತ್ಯದಲ್ಲೂ ಬಗ್ಗರಣೆಯು ಲ್ಲಿ ತಾಸಿರುವದ್ದರಿಂದ ನಿತ್ಯನು ಅಂತರ್ಯಾಮಿಯು ಎಂದೂ ಹೆಮ್ಮೆ ಯಿಂದ ಕಳ್ಳೆಯು ಬಿರಿಯುತ್ತಲಿದೆ. ಇಂತಹ ಕಡ್ಲೆಯನ್ನು ಆಂಬೊಡೆ ಮಾಡಿ ತಿಂದರೆ ಏನಾಗುತ್ತೆಯೋ ?

ಧೊಂಡು—(ಪ್ರವೇಶಿಸಿ) ಗಾಳಗೆ ಬಾಯಿ ಬಿಟ್ಟುಕೊಂಡು ಸುಮ್ಮನೆ ನಿಂತಿರುವಿರಲ್ಲಾ. ಆಂಬೊಡೆ ನಿಮಗೆ ಬೇಡವ್ವೋ ?

ಜನಾ—ಅದಕ್ಕಾಗಿಯೇ ಕಾದಿದ್ದೇನೆ. ಬೇಗತೆಕ್ಕೊಂಡು ಬಾ ?

ಧೊಂಡು—(ಒಳಗೆ ಹೋಗಿ ಬಂದು ಕುಕ್ಕೆಯನ್ನು ಕಂಕುಳಲ್ಲಿರಿಕಿ ಕೊಂಡು, ಒಂದು ಸೀದ ಆಂಬೊಡೆಯೊಡನೆ ಪ್ರವೇಶಿಸಿ) ಇದೋ ಆಂಬೊಡೆ ?

ಜನಾ—ಧೊಂಡು, ಎರಡು ಸೇರು ಕಡ್ಲೆಬೇಳೆ, ಅದಕ್ಕೆ ತಕ್ಕ ಲವಾಜಮೆ ಸಹಾ ತಂದುಕೊಟ್ಟೆನು. ಅಷ್ಟಕ್ಕೂ ಎಷ್ಟಾದರೂ ಒಂದು ಕುಕ್ಕೆ ಆಂಬೊಡೆಯಾಗಬೇಕು. ಅಂಥಾದ್ದರಲ್ಲಿ ನೀನು ಒಂದು ಕುಕ್ಕೇನು ಒಂದಾಂಬೊಡೇನು ತಂದಿರುವೆಯಲ್ಲ. ಏನು ಸಂಗತಿ, ಧೊಂಡು ?

ಧೊಂಡು—ಸಂಗತಿ ಇನ್ನೇನಿದೆ, ಆಂಬೊಡೆ ಮಾಡುತ್ತಾ ಕುಳತೆ. ಹಾಗೆ ಯೇ ರುಚಿ ನೋಡೋಣವೆಂದು ತಿನ್ನಲುಪಕ್ರಮಿಸಿದೆ. ಹೊಸ ಆಂಬೊಡೆಯು ಸಿದ್ಧವಾಗುವಷ್ಟರಲ್ಲಿ ಹಳೆ ಆಂಬೊಡೆಯು ಒಂದಾ ಗುತ್ತಲೊಂದು ಮುಗಿದು ಹೋಗುತ್ತ ಬಂತು ನನಗಿದು ತಿಳ ಯುವ ಹೊತ್ತಿಗೆ ಬಾಂಡ್ಲಿಯಲ್ಲಿ ಈ ಒಂದಾಂಬೊಡೆ ಮಾತ್ರ ಉಳದಿತ್ತು. ಪಾಪ, ದುಡಿದು ಸಂಪಾದಿಸಿಕೊಂಡು ಬರುವವರು ನೀವು, ಇದಾದರೂ ಇರಲೆಂದು ಯೋಚಿಸುವಷ್ಟರಲ್ಲಿ ಈ ಆಂ ಬೊಡೆಯು ಕರ್ರಗಾಗಿ ಹೋಯಿತು. ನಾನು ಪದಾರ್ಥ, ಸ್ವಲ್ಪ ಹೆಚ್ಚಾಗಿ ಬೆಂದದ್ದೆ ನಿಮಗೆ ಸರಿಯಾಯಿತೆಂದು ತೆಗೆದಿಟ್ಟದ್ದೇನೆ. ಆಂಬೊಡೆಯಲ್ಲಿ ಬಹಳವಾಗಿ ಆಶೆ ಪಡುತ್ತಿದ್ದಿರಿ. ಬೇಗ ತಿನ್ನಿ ಅಂದ್ರೆ.

ಜನಾ—ಇದನ್ನು ತಿನ್ನುವುದಕ್ಕೆ ನನಗಾಗುವುದೆ? ಧೊಂಡು, ಅಷ್ಟೊಂದು ಆಂಬೊಡೆಯನ್ನು ಹೇಗೆ ತಿಂದೆಯೆ?

ಧೊಂಡು—ಅದೇನು ಸಾಂಬ್ರಾಜ್ಯ. ಹೀಗೆ ಮುರಿದೆ, ಹಾಗೆತಿಂದೆ. (ತಿಂದುಬಿಡುವಳು).

ಜನಾ—ಅಯ್ಯೊ ಅಯ್ಯೊ, ಎಲ್ಲಾ ಗಾಳಿಯನ್ನೂ ನೀನು ತುಂಬಿಕೊಂಡು ಬಿಟ್ಟು ನನ್ನನ್ನು ಗಾಳಿಗೆ ಬಾಯ್ಬಿಡುವಹಾಗೆ ಮಾಡಿದೆಯೋ? (ಚಮೇಲಿ ಪ್ರವೇಶಿಸುವಳು).

ಜನಾ—ಚಮೇಲಿ ಇದೇನು ನೀನು ಇಲ್ಲಿಗೆ ಬಂದದ್ದು? (ಧೊಂಡುವನ್ನು ನೋಡುತ್ತ) ನಾನು ನಿನ್ನನ್ನು ಕರೆಯಲಿಲ್ಲವಲ್ಲ?

ಚಮೇ—ಯಶೋಧರ ಪಂಡಿತನಿಗೆ ಒಂದು ಸಮಸ್ಯೆಯನ್ನು ಹೇಳುವದಕ್ಕೆ ಬಂದೆನು. ಹಾಗೆಯೇ ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ಇಲ್ಲಿಗೆ ಬಂದೆನು.

ಜನಾ—ಒಳಗೆ ಬಾ. ಸ್ವಲ್ಪಹೊತ್ತು ಮಾತನಾಡುತ್ತಿದ್ದು ಹೋಗುವೆಯಂತೆ.

ಚಮೇ—ಅರಮನೆಗೆ ಹೋಗಬೇಕು ಹೊತ್ತಾಯಿತು. ಅತ್ತೆಯು ಬರಿ ಕುಕ್ಕೆಯನ್ನು ಹಿಡಿದಿರುವ ಸಂದರ್ಭವನ್ನು ನೋಡಿದರೆ ನಿನಗೆ ವಾಸನೆಯೊಂದೇ ಲಭ್ಯವೆಂದು ತೋರುತ್ತೆ ಮಾವ, ಹೋಗಿ ಬಿಟ್ಟು ಬರುತ್ತೇನೆ. (ಹೋಗುವಳು).

ಜನಾ—ಧೊಂಡು, ನಮ್ಮ ಚಮೇಲು ಎಂತಹ ಜಾಣೆ ನೋಡಿದೆಯಾ? ಬರೀ ಕುಕ್ಕೆಯಿಂದಲೂ ಆಂಬೊಡೆ ವಾಸನೆಯಿಂದಲೂ ನಿನ್ನೊಳಗಡಗಿರುವ ಗುಟ್ಟನ್ನು ಕಂಡು ಹಿಡಿದಳಲ್ಲ?

ಧೊಂಡು—ಆಗುಹೋಗಲಿ ಅಂದ್ರೆ. ಅವಳು ಉಟ್ಟುಕೊಂಡಿರುವಳಲ್ಲಾ ಅಂಥ ಶೀರೆ ನನಗೊಂದು ನೀವು ತಂದುಕೊಡಬಾರದೆ?

ಜನಾ—ಸಾಧ್ಯವಿಲ್ಲ. ಅಂಥಾ ಶೀರೆ ನೇಯುವುದೇ ಹದಿನಾರು ಮೊಳ. ನಿನಗೊಂದು ತಂದುಕೊಡುತ್ತೇನೆ, ಹೊಸಮಗ್ಗ ಸ್ಥಾಪಿಸಲಿ. (ಹೋಗುವನು).

ಧೊಂಡು—ರೂಪವತಿಯರನ್ನು ಕಂಡರೆ ನನಗಾಗುವದಿಲ್ಲ. ಎಲ್ಲರೂ ಜಾಲೆಯುಗು. (ಹೋಗುವಳು).

(ತೆರೆಯು ಏಳುವುದು ಅಥವಾ ಬೀಳುವುದು).

---

೬ ನೇ ರಂಗ.

(ಮೋವಾಡದಲ್ಲಿ ರಾಜಗೃಹಪ್ರದೇಶದಲ್ಲಿ ಕುಂಭರಾಣನು ಚಿಂತಿಸುತ್ತ ಪ್ರವೇಶಿಸುವನು).

ಕುಂಭ—

ಕಂದ ॥ ಕೀಲಾಲಧಿಯಿಂದೆ ಜನಿಸಿ ।
ಕಾಲಾಂತಕನೊಳಗಡಂಗಿದಾ ಘೋರವಿಷಂ ॥
ಹಾಲಾಹಲಮೆಲ್ಲವಸುಡು ।
ವ್ಯಾಲೀಶಂಕೆಭರದಿಂದೆ ಸುಡುತಿಹುದೆನ್ನಂ ॥

ಶಂಕೆಯು ಭೀಕರವು. ಪ್ರೀತಿಯ ತರಂಗವು ನನ್ನ ಹೃದಯಸಾಗರದಲ್ಲಿ ಡೋಲಾಯನ ಮಾಡುತ್ತಲಿದ್ದ ಒಂದು ಕಾಲದಲ್ಲಿ, ಆ ನನ್ನ ಪ್ರೀತಿಗೆ ಪಾತ್ರಳಾದ ಮೀರಾಳು ಸಮೀಪದಲ್ಲಿಲ್ಲದಿದ್ದರೆ ನನ್ನ ಜೀವವು ನಿಲ್ಲುವದಿಲ್ಲವೆಂದು ತಿಳದಿದ್ದೆನು ಅವಳಿಲ್ಲದಿದ್ದರೆ ಯಾವ ಅಪೂರ್ವಭೋಗವನ್ನೂ ಅನುಭವಿಸುವದಕ್ಕೆ ಮನಸ್ಸು ಒಪ್ಪುತ್ತಿರಲಿಲ್ಲ. ಅವಳು ಇದ್ದರೆ ವರ್ಷವೊಂದು ನಿಮಿಷವಾಗಿ ಕಳೆಯುತ್ತಲಿತ್ತು. ಆ ನಿರ್ಮಲ ಸ್ವರ್ಗಸಮಸುಖಾನುಭವಕ್ಕೆ ಈ ಆಯುರ್ಪರಿಮಿತಿಯು ತೀರ ಸಾಲದೆಂದು ತಿಳದಿದ್ದೆನು. ಈಗದೆಲ್ಲಿಹೋಯಿತು ?

ಶಂಕೆಯು ಭೀಕರವು. ಆ ಅನಂತ ಪ್ರೇಮಸಾಗರವು ಈ ನಿಷ್ಟುರ ಶಂಕೆಯೆಂಬ ಬಡಬಾನಲದಿಂದ ಶೋಷಿಸಿ ಹೋಯಿತೇಕೆ ? ಆ ಪ್ರೇಮಸಾಗರದಲ್ಲಿ ಆನಂದದಿಂದ ನಲಿದಾಡುತ್ತಲಿದ್ದ ನನ್ನ ಜೀವಪ್ಲವವು ಒಡೆದು ಹೋಯಿತೇಕೆ ? ಇದು ಅವಳ ರೂಪದ ಪ್ರಭಾವವೋ ? ಅಥವಾ ಇದು ಅವಳ ಉಜ್ವಲ ಕೀರ್ತಿಯ ಪ್ರಭಾವವೋ ?

ಶಂಕೆಯು ಭೀಕರವು. ಅಕ್ಬರನು ಅವಳ ಉಭಯ ಮಹಿಮಾತಿಶಯಗಳಿಂದ ಮರುಳಾಗಿರುವನಂತೆ. ಆದುದರಿಂದಲೇ ಅವನು ರಾಜಪುತ್ರಾಣದ ಮೇಲೆ ಯುದ್ಧೋದ್ಯುಕ್ತನಾಗಿ ಬಂದಿರುವುದು. ಯವನನು ಸಂಪದಕಾಮಿಯು. ಸ್ತ್ರೀಕಾಮಿಯು. ಇದಕ್ಕಾಗಿ ಅತ್ತಿತ್ತ ನೋಡದೆ ಮುಂದೆ ಹಾಯುವನು. ಐಕಮತ್ಯವಿಲ್ಲದುದರಿಂದಲೂ, ಕುತ್ಸಿತ ಹೃದಯರಾದುದರಿಂದಲೂ ರಜಪುತ್ರಾಣದ ಚಿಕ್ಕ ಸಂಸ್ಥಾನಗಳು ಅವನಿಗೆ ಕೈವಶವಾದವಾತ್ರಕ್ಕೆ ಈ ಮೇವಾಡವು ಅವನಿಗೆ ದಕ್ಕುವುದೆ? ಅದಿರಲಿ, ಮಿರಾವು ಯಾರಿಗಾಗಿ ಹಗಲಿರುಳೆನ್ನದೆ ಏಕಾಂತವಾಗಿ ಅಂತಃಪುರದಲ್ಲಿ ದೀನಾಲಾಪಗಳನ್ನು ಮಾಡುತ್ತಿರುವಳು? ಕೇಳಿದರೆ ಪ್ರಭಾವಿಗೆನ್ನುವಳು. ಅಹೋರಾತ್ರಿಯೆನ್ನದೆ ಗೋವರ್ಧನಧಾರಿಯ ಮಂದಿರಕ್ಕೆಂದು ಹೋಗುವಳು. ಸಾಧುಸಜ್ಜನ ಸಂಗನೆಂದೂ ದೇವದೂತರೆಂದೂ ಭಿಕಾರಿಗಳೊಡನೆ ಸಲಿಗೆಯಿಂದ ಕಲೆತು ಮಾತನಾಡುವಳು. ಯಾರು ಬಲ್ಲರು? ಅವರು ಸಾಧುಗಳೋ, ಸಾಧುವೇಷಧಾರಿಗಳೋ? ದೇವದೂತರೋ, ರಾಜದೂತರೋ? ಯಾರು ಹೇಳಬಲ್ಲರು? ಶಂಕೆಯು ಅತಿಭೀಕರವು.

(ಭಿಕಾರಿಯು ಹುಡುಗನು ಸೊಂಟದಲ್ಲಿ ರತ್ನಮಾಲಿಕೆಯನ್ನು ಸಿಕ್ಕಿಸಿಕೊಂಡು ಪ್ರವೇಶಿಸಿ ಕುಂಭನನ್ನು ನೋಡಿ ಭಯದಿಂದ ಹಿಂದಾಗುವಷ್ಟರಲ್ಲಿ).

**ಕುಂಭ**—ನೀನಾರು?

**ಭಿಕಾ**—ನಾನೊಬ್ಬ ಭಿಕಾರಿಯು.

**ಕುಂಭ**—ಅದು ಸ್ಪಷ್ಟವಾಗಿಯೇ ಇದೆ. ನೀನಿಲ್ಲಿಗೇಕೆ ಬಂದೆ? (ಭಿಕಾರಿಯು ಸುಮ್ಮನಿರಲು) ನಾನು ಹೇಳುವ ಮಾತು ನಿನಗೆ ಕೇಳಿಸಲಿಲ್ಲವೋ, ಬೇಗ ಹೇಳು?

**ಭಿಕಾ**-ಮಹಾರಾಣಿಯವರನ್ನು ಮುಖ್ಯವಾಗಿ ನೋಡಬೇಕೆಂದು ಬಂದೆನು.

**ಕುಂಭ**—(ಸ್ವ) ಎಲ್ಲರೂ ಮಹಾರಾಣಿಯವರನ್ನು ಮುಖ್ಯವಾಗಿ ನೋಡುವವರೆ?

(ಪ್ರ) ಏಕೆ ನೋಡಬೇಕು ?

ಹುಡುಗ—(ಸುಮ್ಮನಿರುವನು. ಮತ್ತು ಸೊಂಟದ ಸಮೀಪಕ್ಕೆ ಕೈಹಾಕಿ ಹಿಂದಕ್ಕೆ ತೆಗೆಯುವನು).

ಕುಂಭ—ನಿನ್ನ ಸೊಂಟದಲ್ಲಿರುವುದೇನು ತಾ ? (ಹುಡುಗನು ಕೊಡುವನು). ನಿನಗಿದೆಲ್ಲಿ ದೊರೆಯಿತು ?

ಹುಡುಗ—ಕ್ಷಮಿಸಬೇಕು. ಗೋವರ್ಧನಧಾರಿಯ ಮಂದಿರದಲ್ಲಿ ದೇವರ ಪಾದದ ಮೇಲೆ ಈ ಹಾರವು ಬಿದ್ದಿತ್ತು. ಮಹಾರಾಣಿಯವರು ದೇವರ ಪೂಜೆಯನ್ನು ಮಾಡುತ್ತಲಿದ್ದುದರಿಂದ ಈ ಆಭರಣವು ಅವರಿಗೆ ತಿಳಿಯದಹಾಗೆ ಎಲ್ಲೋ ಅವರ ಕಂಠದಿಂದ ಜಾರಿ ಬಿದ್ದು ಹೋಗಿರಬೇಕು, ಮರಳಿ ಅವರಿಗೆ ಕೊಟ್ಟುಬಿಡೋಣವೆಂದು ಇದನ್ನು ತೆಗೆದುಕೊಂಡು ಬಂದೆನು. ನಾನು ಅಲ್ಲೇ ಮಲಗಿದ್ದೆನು.

ಕುಂಭ—(ನೋಡುತ್ತ) ಇದು ಮಹಾರಾಣಿಯವರ ಹಾರವೆಂದು ನಿನಗೆ ಗೊತ್ತಾದುದು ಹೇಗೆ ?

ಹುಡುಗ—ಅಮೂಲ್ಯವಾದ ಈ ರತ್ನಹಾರವು ರಾಜಾರ್ಹವಾದುದರಿಂದಲೂ, ಮತ್ತು ಮಹಾರಾಣಿಯವರೊಡನೆ ಮಾತನಾಡುತ್ತಲಿದ್ದ ಮನುಷ್ಯರು ಸಾಧುಗಳಾದುದರಿಂದಲೂ ಇದು ಮಹಾರಾಣಿಯವರದೆ ಆಗಿರಬೇಕೆಂದು ಊಹಿಸಿದೆನು.

ಕುಂಭ—ಅವರು ಮಹಾರಾಣಿಯವರೊಡನೆ ಏನು ಮಾತನಾಡುತ್ತಲಿದ್ದರು ?

ಹುಡುಗ—ಅದು ನನಗೆ ತಿಳಿಯದು. ಅವರು ಮಾತನಾಡುತ್ತಲಿದ್ದ ಸ್ಥಳಕ್ಕೆ ಸ್ವಲ್ಪ ದೂರವಾಗಿ ಮಲಗಿದ್ದೆನಾದುದರಿಂದ ನನ್ನ ಕಿವಿಗೆ ಬೀಳಲಿಲ್ಲ. ಅವರೆದುರಿಗೆ ಮಹಾರಾಣಿಯವರು ಒಂದು ಹಾಡನ್ನು ಹಾಡಿದುದು ಕನಸಿನಲ್ಲಿ ಕಂಡಂತೆ ಅಸ್ಪಷ್ಟವಾಗಿ ಜ್ಞಾಪಕದಲ್ಲಿದೆ,

ನಾನು ಅರ್ಧ ನಿದ್ರೆಯಲ್ಲಿದ್ದುದರಿಂದ ಬಂದೆರಡು ಸಲ ಕಣ್ತೆರದಾಗ ಅವರನ್ನು ನೋಡಿದೆನು.

ಕುಂಭ —ಆವರು ಸಾಧುಗಳೆಂದು ಹೇಗೆ ಹೇಳಬಲ್ಲೆ ?

ಹುಡುಗ—ಅವರ ವೇಷದಿಂದ. ಹಾಗೆಯೇ ಮಾತನಾಡುತ್ತ ಅವರು ಮಹಾರಾಣಿಯವರ ಕೈಯಲ್ಲಿ ಏನೋ ಕೊಟ್ಟರು. ಮಂದಿರಕ್ಕೆ ಉಪಾಯನವಿರಬೇಕು. ನನಗೆ ನಿದ್ರೆಯಿಂದ ಕಣ್ಣು ಮುಚ್ಚಿ ಹೋಯಿತು. ಪುನಃ ಕಣ್ತೆರೆದಾಗ ಮಂದಿರದಲ್ಲಿ ಯಾರೂ ಇರಲಿಲ್ಲ.

ಕುಂಭ—ಅವರನ್ನು ಹಿಂದೆಲ್ಲಾದರೂ ನೋಡಿಬಲ್ಲೆಯಾ ?

ಹುಡುಗ— ನಾನು ಕಾಣೆನು. ಈ ಊರಿನಲ್ಲೆಲ್ಲೂ ಎಂದೂ ನೋಡಿಲ್ಲವಾಗಿ ಪರಸ್ಥಳದವರೆಂದೇ ಹೇಳಬೇಕು. ಮಂದಿರದ ದೀವಿಗೆಯ ಬೆಳಕು ಅವರ ಮುಖದ ಮೇಲೆ ಬಿದ್ದಿತ್ತು. ಅವರಲ್ಲೊಬ್ಬನು ಕೃಶಾಂಗನಾಗಿದ್ದನು. ಮತ್ತೊಬ್ಬನು ದೃಢಕಾಯನೂ ಕುಳ್ಳನೂ ಆಗಿದ್ದನು. ಮುಖವು ಸಲ್ಲಕ್ಷಣಯುಕ್ತವಾಗಿತ್ತು. ಮುಖದ ಮೇಲೆ ಬಂದು ಕಪ್ಪು ಮಚ್ಚೆ ಕಾಣಿಸುತ್ತಲಿತ್ತು.

ಕುಂ—ಹಾ! ನೀನು ಹೋಗು ಮಹಾರಾಣಿಯವರ ಕಂಠದಿಂದ ಬಿದ್ದ ಈ ಹಾರವನ್ನು ನಾನೇ ಅವರಿಗೆ ಕೊಡುವೆನು. (ಹುಡುಗನು ವಂದಿಸಿ ಹೋಗುವನು). ಭೀಕರಶಂಕಾಂಕುರಕ್ಕೆ ಇದೇ ವಿಷಫಲವು —ಹೋಗಿ ವಿಷಯವನ್ನು ಸ್ಪಷ್ಟಪಡಿಸುವೆನು (ಹೋಗುವನು).

ತೆರೆಯು ಏಳುವುದು.

---

## ೭ ನೇ ರಂಗ.

(ವಿಶ್ರಾಂತಿಪುರ, ಆಸನಾಸೀನಳಾದ ಮೀರಾಬಾಯಿ ಕೈನಲ್ಲಿ ಚಿನ್ನ ಗೋವರ್ಧನಧಾರಿಯ ವಿಗ್ರಹವನ್ನು ಹಿಡಿದುಕೊಂಡು ಚಿಂತಾಕ್ರಾಂತಳಾಗಿ ಪ್ರವೇಶಿಸುವಳು).

ವಿೂರಾ— ರಾಗ—ಹಿಂದೂಸ್ಥಾನಿ ತೋಡಿ. ತಾಳ—ಏಕ.

(ಪ) ಕೋಪವದೇಕೆ ದೇವ । ಮಹಾನುಭಾವ ॥

(ಅ) ನೇಮವು ತಪ್ಪಿತೆ ಪ್ರೇಮವು ತಗ್ಗಿತೆ । ಸೇವೆಯು ಇಲ್ಲದಾಯ್ತೆ ಈ ದಾಸಿಯೊಳು ॥

(ವಿಗ್ರಹವನ್ನು ಸ್ವಸ್ಥಾನದಲ್ಲಿಟ್ಟು)

(ಚ) ದ್ರೋಹವನಗೈದ ಕಾಗೆಯನೆ ಕಾದೆ । ಶಬರನ ಸಲಹಿದೆ ಈ ದಾಸಿಯೊಳು ॥

(ಮರೆಯಲ್ಲಿ ಕುಂಭನು ಪ್ರವೇಶಿಸಿ ನಿಂತುಕೊಳ್ಳುವನು).

ವಿೂರಾ—ಹೇ ಪ್ರಭೋ, ನಿನ್ನಲ್ಲಿ ನನ್ನ ಮನಸ್ಸು ಐಕ್ಯವಾಯಿತು. ನಿನ್ನ ನಾಮೋಚ್ಚಾರಣೆಯಲ್ಲದೆ ಈ ನಾಲಿಗೆಯು ಬೇರೊಂದನರಿಯದು. ನಿನ್ನ ಪಾದಸೇವೆಗಲ್ಲದೆ ಈ ಕರಗಳು ಅನ್ಯಥಾ ಉತ್ಸಾಹಪಡವು. ನಿನ್ನ ದಿವ್ಯಮೂರ್ತಿಯೊಂದನ್ನಲ್ಲದೆ ಈ ನೇತ್ರಗಳು ಮತ್ತಾವುದನ್ನೂ ನೋಡಿ ಸಂತೋಷಪಡವು. ಪ್ರಭೋ, ನಿನ್ನ ಪ್ರೇಮವೇ ನನಗೆ ಸಂಪದವು ನಿನ್ನ ಪ್ರೇಮವೇ ನನ್ನ ಜೀವವು. ನಿನ್ನ ಪ್ರೇಮವೇ ನನ್ನ ಸರ್ವಸ್ವವು. ನಿನ್ನ ಪ್ರೇಮಭಿಕ್ಷೆಯೊಂದಲ್ಲದೆ ಮತ್ತೇನನ್ನೂ ಯಾಚಿಸೆನು. ಪ್ರೇಮಭಿಕ್ಷೆಯೊಂದು ಧನಕನಕಾದಿ ಯಾವ ರಾಜಭೋಗವನ್ನೂ ಅಪೇಕ್ಷಿಸೆನು. ನಿನ್ನ ಪೂಜೆ, ನಿನ್ನ ಸ್ತೋತ್ರ, ನಿನ್ನ ಸ್ಮರಣೆ, ನಿನ್ನ ಪಾದಸೇವೆ ಇವೆಲ್ಲವೂ ನಿರ್ವಿಘ್ನವಾಗಿ ನಿರಂತರ ನಡೆಯುವಂತೆ ದಯಪಾಲಿಸು. ಅಯ್ಯೋ, ನೀನು ಈ ನಿಷ್ಠುರವಾದ ಸ್ಥಿತಿಯಲ್ಲಿದ್ದರೆ ನನ್ನ ಮನೋರಥವೆಂತು ಸಫಲವಾಗುವುದು ? ಪ್ರಭೋ, ಈ ವೇಷವು ನಿನಗೆ ಒಪ್ಪುವುದೆ ? ಅಥವಾ ಈ ಚಿತ್ರವಿಚಿತ್ರ ರೀತಿಗಳಿಂದ ನನ್ನನ್ನು ಪರೀಕ್ಷಿಸಲೆಳಸುವೆಯೋ ? ನಿನಗೆ ಇದು ಲೀಲಾವಿನೋದವಾಗಿದ್ದರೂ ನನಗೆ ದುಃಖಕರವು. ನಿನಗೆ ಈ ವ್ಯಸನವು ನಿಮಿಷಮಾತ್ರದ್ದಾದರೂ ನನಗೆ ಚಿರಸ್ಥಾಯಿಯಾದದ್ದು. ಪರಮದಯಾಳೋ, ಈ ದಾಸಿಗೆ ನಿನ್ನ ಪೂರ್ಣ ಮುಖಚಂದ್ರನ ದರ್ಶನವಿತ್ತು ನಿನ್ನ ವಿರ

ಕ್ತಿಯಿಂದ ಪರಿತಪ್ತವಾದ ಈ ಹೃದಯದ ಮೇಲೆ ನಿನ್ನ ಪ್ರೇಮಾಮೃತಧಾರೆಯನ್ನು ಕರೆಯದೆ ನನ್ನನ್ನು ಸುಮ್ಮನೆ ಯಾತನೆಗೀಡು ಮಾಡಬಹುದೆ ?

ರಾಗ—ಕಾಪಿ. ತಾಳ—ಛಾಪು.

(ಪ) ಅಬಲೆಯ ನೋಯಿಪುದು ತರವೇ ಪ್ರಭೋ ॥

(ಚ) ಕವಿರಾಜಸೇವಿತ, ಗಿರಿವನಮಾಲಾಧರ, ಭುವನಾಕ್ರಾಂತಪದ, ದೀನಬಂಧೋ ॥

ಕುಂಭ—(ಸ್ವಗತ) ಈ ಕುಲಕಳಂಕಿಯ ಪ್ರಣಯವನ್ನು ಇನ್ನು ಕೇಳಲು ಸಾಧ್ಯವಿಲ್ಲ. (ಮಿರಾಳ ಸಮೀಪಕ್ಕೆ ಹೋಗುವನು. ಆವನ ತಶಿರಳಾಗಿರುವ ಮೀರಾವು ಇವನನ್ನು ಕಾಣದೆ ಹಾಗೆಯೇ ಸುಮ್ಮನಿರುವಳು). (ಪ್ರಕಾಶ). ಮೀರಾ !

ಮೀರಾ—(ಗಾಬರಿಯಿಂದೆದ್ದು) ಆರ್ಯಪುತ್ರನಿಗೆ ನಮಸ್ಕರಿಸುವೆನು. ಆರ್ಯಪುತ್ರನ ಆಗಮನವನ್ನು ಮೊದಲೇ ತಿಳಿದುಕೊಳ್ಳದಿದ್ದಕ್ಕಾಗಿ ಕ್ಷಮಿಸಬೇಕು. ಅನ್ಯಮನಸ್ಕಳಾಗಿದ್ದೆನು.

ಕುಂಭ—ಬಲ್ಲೆನು.

ಮೀರಾ—ಆರ್ಯಪುತ್ರನ ಮುಖಮುದ್ರೆಯು ಇಷ್ಟು ಗಭೀರವಾಗುವುದಕ್ಕೆ ಕಾರಣವೇನು ? ಮನಸ್ಸಿಗೆ ಭಯವಾಗುವುದು.

ಕುಂಭ—ಅಕಾರ್ಯಕ್ಕೆ ಭಯವೇ ಫಲವು.

ಮೀರಾ—(ಸ್ವಲ್ಪ ಸುಮ್ಮನಿದ್ದು) ನನಗೋಸ್ಕರವಾಗಿ ಯಾವ ಭಯವನ್ನು ಪಡೆನು ?

ಕುಂಭ—ಅದಿರಲಿ, ಈ ಹಾರವನ್ನು ಬಲ್ಲೆಯಾ ?

ಮೀರಾ—(ಚನ್ನಾಗಿ ನೋಡದೆಯೆ) ನನಗೆ ಹೇಗೆ ತಿಳಿಯಬೇಕು ?

ಕುಂಭ—ಸ್ವಲ್ಪ ಚನ್ನಾಗಿ ನೋಡು ? ಇದು ಯಾರದು ?

ಮೀರಾ—(ನೋಡಿ) ಸ್ವಾಮಿಯದು.

ಕುಂಭ—ಸ್ವಾಮಿಾ ! ನಿನ್ನ ವಿಲಾಪವು ಆ ಸ್ವಾಮಿಗೆಯೇ. ಗುಪ್ತವಾಗಿ ಅಂತಃಪುರದಲ್ಲಿ ನೀನು ಮಾಡುವ ಸಲ್ಲಾಪಗಳು ಆ ಸ್ವಾಮಿಯೊಡನೆಯೇ. ನಿನಗೆ ನಿಜರೂಪದಲ್ಲೂ ಛದ್ಮರೂಪದಲ್ಲೂ ಆನಂದವನ್ನು ಈಯುವವನು ಆ ಸ್ವಾಮಿಯೇ. ನಿನ್ನ ಸೇವೆಗೆ ಸಂತುಷ್ಟನಾಗಿ ಹಾರವನ್ನಿತ್ತವನೂ ಆ ನಿನ್ನ ಸ್ವಾಮಿಯೇ. ಈ ಪರಕೀಯ ಸ್ವಾಮಿಯಿಂದ ನಿಜವಾದ ಸ್ವಾಮಿಯು ನಿವಾರಿಸಲ್ಪಟ್ಟನು. ಮೇವಾಡದ ಶ್ವೇತಛತ್ರವು ಮಲಿನವಾಯಿತು.

ಮಾರಾ—ಆರ್ಯಪುತ್ರ ಇದೇನು ಪ್ರಮಾದವು ?

ಕುಂಭ—ಪ್ರಮಾದವಲ್ಲದೆ ಮತ್ತೇನು ? ಭೂಸಾಂಬ್ರಾಜ್ಯಸುಖಾನುಭವಕ್ಕೆ ಸ್ವಚ್ಛಕುಲ ಸಾಂಬ್ರಾಜ್ಯವೇ ತ್ರಾಣವು. ಸ್ವಚ್ಛವು ತುಚ್ಛವಾಗಿ ಮಾಡಲ್ಪಟ್ಟ ಮೇಲೆ ಈ ಭೂಮಿಯ ಮೇಲೆ ಬಾಳುವುದಕ್ಕೆ ಉಳಿದಿರುವುದಾದರೂ ಏನು ? ನಿಜವನ್ನು ಹೇಳು, ಈ ಹಾರವನ್ನು ನಿನಗೆ ಕೊಟ್ಟವರು ಯಾರು ?

ಮಾರಾ—ಆರ್ಯಪುತ್ರನಲ್ಲಿ ನಾನೆಂದಿಗೂ ಅನೃತವನ್ನು ನುಡಿದವಳಲ್ಲ, ನಿಜವನ್ನೇ ಹೇಳುವೆನು. ಗೋವರ್ಧನಧಾರಿಯ ಮಂದಿರಕ್ಕೆ ಇಬ್ಬರು ಸಾಧುಗಳು ಬಂದಿದ್ದರು. ದೇವರಿಗೆ ಅರ್ಪಿಸಬೇಕೆಂದು ಒಬ್ಬನು ಪೂಮಾಲೆಯನ್ನೂ ಮತ್ತೊಬ್ಬನು ತುಳಸೀ ಸರವನ್ನೂ ಭಕ್ತಿಯಿಂದ ನನ್ನ ಕೈಗೆ ಕೊಟ್ಟರು. ನಾನು ಹಾಗೆಯೇ ಸಮರ್ಪಿಸಲು ಭಕ್ತಪರಾಧೀನನಾದ ಗೋವರ್ಧನಧಾರಿಯ ಕರುಣಾಕಟಾಕ್ಷವೀಕ್ಷಣದಿಂದ ತುಳಸೀ ಮಾಲೆಯು ಈ ನವರತ್ನ ಮಾಲಿಕೆಯಾಗಿ ಮಾಡಲ್ಪಟ್ಟಿತು. ನಾನು ಈ ಆಶ್ಚರ್ಯವನ್ನು ಆ ಸಾಧುಗಳಿಗೆ ತಿಳಿಸಬೇಕೆಂದು ಹಿಂತಿರುಗಿ ನೋಡುವಲ್ಲಿ ಅವರು ಹೊರಟು ಹೋಗಿದ್ದರು.

ಕುಂಭ—ಇನ್ನೊಂದಾಶ್ಚರ್ಯವನ್ನು ನೀನು ಗಮನಿಸಲಿಲ್ಲವೇನೋ ? ತುಳಸೀ ಮಾಲೆಯು ರತ್ನಮಾಲಿಕೆಯಾದರೂ ಪುಷ್ಪಸರವು ಪುಷ್ಪಸರವಾಗಿಯೇ ನಿನ್ನ ಕೈಯ್ಯಲ್ಲಿತ್ತಲ್ಲವೇ ?

ವಿೂರಾ—ನಿಜ. ಆದರೇನು ? ಪ್ರೊಮಾಶೆಯನ್ನು ಕೊಟ್ಟವನ ಭಕ್ತಿಗಿಂತಲೂ ತುಳಸೀ ಮಾಲೆಯನ್ನು ಕೊಟ್ಟವನ ಭಕ್ತಿಯು ಅತಿಶಯವಾಗಿ ಗೋವರ್ಧನಧಾರಿಗೆ ಸಮರ್ಪಕವಾಗಿ ತೋರಿ ಆ ರೀತಿಯಾಗಿರುವುದು ಸ್ಪಷ್ಟವಾಗಿಯೇ ಇದೆ ?

ಕುಂಭ—ವಿೂರಾ, ನಾನೇನು ಅರಿಯದವನೆಂದು ತಿಳಿದಿರುವಿಯಾ ? ಒಂದು ಕಾಲದಲ್ಲಿ ಈ ಹಾರವು ಕುಥವಾಡದ ಸಿಂಹೇಂದ್ರನಲ್ಲಿನ ಕಂಠದಲ್ಲಿ ಶೋಭಿಸುತ್ತಲಿತ್ತು. ಆ ವೀರ ರಜಪೂತನು ಮೃತನಾದ ಮೇಲೆ ಅವನ ಮಗನಾದ ನರೇಂದ್ರನು ಪೌರುಷರಹಿತನಾದುದರಿಂದ ಮೊಗಲರಿಗೆ ಸಾಮಂತನಾಗಿ ಅಕ್ಬರನ ಪ್ರೀತ್ಯರ್ಥವಾಗಿ ಈ ಹಾರವನ್ನು ಕೊಟ್ಟನು. ಇದುವರಿವಿಗೂ ಅಕ್ಬರನ ಕೊರಳಿನಲ್ಲಿ ತಗಲುಬಿದ್ದಿದ್ದ ಈ ಮಾಲಿಕೆಯು ಈಗ ನಿನಗೆ ಅವನಿಂದ ಸಮರ್ಪಿಸಲ್ಪಟ್ಟಿತು.

ವಿೂರಾ—ಕ್ಷಮಿಸಬೇಕು, ಆರ್ಯಪುತ್ರ.

ಕುಂಭ—ನಿಲ್ಲು. ನಿನ್ನ ವಿನಯವು ಬೇಡ. ನಿನ್ನೊಂದಿಗೆ ಮಂದಿರದಲ್ಲಿ ಸಲ್ಲಾಪಿಸಿದ ಮುಖದಲ್ಲಿ ಮಚ್ಚೆಯುಳ್ಳ ಕಾಳನು ಅಕ್ಬರನು. ನಿನ್ನಿಂದಲೆ ಅಲ್ಲವೆ ಆ ದುರಾತ್ಮನು ನನ್ನನ್ನು ಲಕ್ಷ್ಯಕ್ಕೆತಾರದೆ ನನ್ನ ರಾಜ್ಯದಲ್ಲೇ, ನನ್ನ ಕಣ್ಣೆದುರಿಯಲ್ಲೇ, ನನ್ನ ಮುಖಕ್ಕೆ ಮಸಿಯನ್ನು ಹಚ್ಚಿದನು. ಹಾ, ದುರ್ಭರವು ! ದುರ್ಭರವು !! ದುರ್ಭರವು !!!

ವಿೂರಾ—ಆರ್ಯಪುತ್ರ !

ಕುಂಭ—ಸಾಕು. ಈ ಅಕಾರ್ಯಕ್ಕೆ ಮರಣದಂಡನೆಯೇ ಶಿಕ್ಷೆಯು. ಅವಸಾನಕಾಲದಲ್ಲಿ ನನ್ನ ಜನನಿಗೆ ಹೆಂಗಸಿನ ಪ್ರಾಣವನ್ನು ನನ್ನ ಕೈಯ್ಯಾರ ತೆಗೆಯುವುದಿಲ್ಲವೆಂದು ಮಾತುಕೊಟ್ಟಿರುವೆನಾದುದರಿಂದ ನಿನಗೆ ನನ್ನ ಹಸ್ತದಿಂದ ಮರಣವಿಲ್ಲವು. ನೀನು ಮಹಾರಾಣಿಯಾಗಿರುವುದರಿಂದಲೂ ಒಂದು ಕಾಲದಲ್ಲಿ ನನ್ನ ಪ್ರೀತಿಗೆ ಪಾತ್ರಳಾಗಿದ್ದುದರಿಂದಲೂ ನಿನಗೆ ಅಲ್ಪನಾದ ಪರಕೀಯನಿಂದ ಮರಣವಿಲ್ಲವು. ಆದರೆ—

ವಿಜಾರಾ—ಆರ್ಯಪುತ್ರನ ಆಜ್ಞೆಯನ್ನು ನಾನು ಶಿರಸಾವಹಿಸಿ ನಡೆದುಕೊಳ್ಳು ಲುಳ್ಳವಳು. ಆದರೆ ನನ್ನ ವಿಜ್ಞಾಪನೆಯನ್ನು ಲಾಲಿಸದೆ ಶಿಕ್ಷೆಯನ್ನು ವಿಧಿಸುವುದು ಧರ್ಮವೇ? ಹಿಂದೆ ಶ್ರೀ ಸೀತಾ—

ಕುಂಭ—ನಿನ್ನಿಂದ ನನಗೆ ಧರ್ಮಬೋಧೆಯು ಬೇಡ. ಹಿಂದೆ ಶ್ರೀ ರಾಮಚಂದ್ರನು ಪವಿತ್ರಳೆಂದು ತಿಳಿದಾಗ್ಯೂ ಲೋಕಾಪವಾದಕ್ಕೆ ಶಿರಬಾಗಿ ಶ್ರೀ ಜಾನಕಿಯನ್ನು ಅರಣ್ಯಕ್ಕೆ ಕಳುಹಿಸಿದನೆಂಬುದು ತಿಳಿದೇ ಇದೆ. ಆಗಿನ ಕಥೆಯೇ ಬೇರೆ. ಪ್ರಕೃತದಲ್ಲಿ ಕುಂದನ್ನೇ ಹುಡುಕಿ ನೋಡುವ ಲೋಕದ ದೃಷ್ಟಿಪಥದಲ್ಲಿ ಮಣಿಹಾರವನ್ನು ಕೊಟ್ಟ ಯುವನ ಸಾರ್ವಭೌಮನೂ ಮಣಿಹಾರವನ್ನು ತೆಗೆದುಕೊಂಡ ಸುಂದರಸ್ತ್ರೀಯೂ ಮೂರ್ತೀಭವಿಸಿರುವರು. ಇದರ ಫಲಿತಾಂಶವು ದುರ್ದಮನೀಯವಾದ ಸ್ವೇಚ್ಛಕರ ನಿರ್ಮೂಲವು. ವಿಜಾರಾ! ನೀನು ನಿರ್ದೋಷಿಯಾಗಿದ್ದರೂ ಸರಿಯೇ, ನನ್ನ ವಿಮರ್ಶೆಯು ವ್ಯತಿರಿಕ್ತವಾಗಿದ್ದರೂ ಸರಿಯೇ, ನನ್ನ ವಿಧಿಯು ತಪ್ಪಾದರೂ ಸರಿಯೇ, ನಾನು ಕೊಡುವ ಶಿಕ್ಷೆಯು ಕ್ರೂರವಾದರೂ ಸರಿಯೇ, ನೀನು ಸತೀಮಣಿಯೆಂದು ಹೇಳಿಕೊಳ್ಳುವುದು ನಿಜ್ಜವಾದರೆ, ನಿನಗೆ ಪತಿಯ ವಚನವು ನಿರಾಕರಿಸಬಾರದುದೆಂದು ತೋರುವುದಾದರೆ, ನಿನ್ನ ಪ್ರಾಣವನ್ನು ನೀನೇ ನೀಗಿ ನನ್ನ ಶಿಕ್ಷಾವಿಧಿಯನ್ನು ನೆರವೇರಿಸು.

ವಿಜಾರಾ—(ಕೈಮುಗಿದು ನಿಲ್ಲುವಳು).

ಕುಂಭ—ಪ್ರತ್ಯುತ್ತರವನ್ನೀಯದೆ ಹೊರಟು ಹೋಗು. ನಿಲ್ಲಬೇಡ?

ವಿಜಾರಾ—(ನಮಸ್ಕರಿಸಿ ಖಿನ್ನತೆಯಿಂದ ಹೋಗುವಳು).

ಕುಂಭ—(ತಲೆಯ ಮೇಲೆ ಕೈಯಿಟ್ಟುಕೊಂಡು ವಿಜಾರಾ ಕುಳಿತಿದ್ದ ಆಸನದಲ್ಲಿ ಕುಳಿತುಕೊಳ್ಳುವನು).

ತೆರೆಯು ಬೀಳುವುದು.

---

## ೪ ನೇ ರಂಗ.

(ಯಶೋಧರಪಂಡಿತನು ಮನೆಯ ಮುಂಭಾಗದಲ್ಲಿ ಪ್ರವೇಶಿಸುವನು).

**ಯಶೊ**—ನಾನೇನು ಸಾಮಾನ್ಯನೇ, ಶೈವಮತಖಂಡನೆಗೆಂದು ಬರುವ ಮಂದಮತಿಗಳಿಗೆ ಮುಂಡನವನ್ನು ಮಾಡಿಸಬಲ್ಲ ಸಮರ್ಥ ಯಶೋದರಪಂಡಿತ. ನಮ್ಮ ಮಹಾರಾಜ ಕುಂಭರಾಣಾವಿನಲ್ಲಿ ನನಗೆ ಆಶ್ರಯ. ನನ್ನಲ್ಲಿ ಶೈವಮತಕ್ಕೆ ಆಶ್ರಯ. ಶೈವಮತಾವಲಂಬಿಗಳಿಗೆ ನಾನು ಮುಖ್ಯಪ್ರಾಣ. ನಾನೇನು ಸಾಮಾನ್ಯ ಮನುಷ್ಯನೇ, ಲಿಂಗಾಯತ ಮತೋತ್ಪತ್ತಿನಿರ್ಣಯಸಿಂಧು, ಕೈಲಾಸಕಲ್ಪವಲ್ಲರಿಯೇ ಮುಂತಾದ ಉದ್ಧಾಮಗ್ರಂಥಗಳನ್ನು ರಚಿಸಿದ್ದೇನೆ. ಆಗಲೇ ಲಕ್ಷಗಟ್ಲೆಯಾಗಿ ಪ್ರತಿಗಳು ವಿಕ್ರಯವಾಗಿ ಹೋಗಿ ಗ್ರಂಥಗಳು ಐದನೇ ಮುದ್ರಣದಲ್ಲಿರುವುದರಿಂದಲೇ, ನನ್ನ ಪುಸ್ತಕಗಳು ಎಂಥವೆನ್ನುವುದು ಸ್ಪಷ್ಟವಾಗಿ ಗೊತ್ತಾಗುತ್ತೆ. ನಾನೇನು ಸಾಮಾನ್ಯಪುರುಷನೇ, ಈ ವೈಜ್ಞಾನಿಕ ಗ್ರಂಥಗಳಲ್ಲದೆ ಇನ್ನೂ ಅನೇಕ ನಾಟಕಾದಿಗಳನ್ನು ವಿರಚಿಸಿದ್ದೇನೆ. ಆಗದವರು ಚಂದಿಲ್ಲವೆಂದ ಮಾತ್ರಕ್ಕೆ ಏನು? (ತೆರೆಕಡೆ ನೋಡಿ) ಇದೋ ನಮಗೆ ಆಗದವರ ಪಂಗಡಕ್ಕೆ ಸೇರಿದ ಉಂಭಾವನತಾರಂ ವೆಂಕಟದೀಕ್ಷಿತನಿತ್ತಲೇ ಬರುತ್ತಿರುವನು.

(ವೆಂಕಟದೀಕ್ಷಿತನು ಪ್ರವೇಶಿಸುವನು).

**ಯಶೊ**—ಬನ್ನಿಸ್ವಾಮಿ ದೀಕ್ಷಿತರೇ, ನಿಮಗೆ ಸ್ವಾಗತವಿರಲಿ.

**ವೆಂಕಟ**—ಪಂಡಿತರೇ, ನಿಮ್ಮ ಹೊಸನಾಟಕವನ್ನು ನೆನ್ನೆ ನಾವು ನೋಡಿದೆವು. ಆಗಲಿಂದ ನಿಮಗೆ ಕೆಲವು ಹಿತವಚನಗಳನ್ನು ಹೇಳಬೇಕೆಂದು ನಮಗೆ ತುಂಬಾ ಕುತೂಹಲವಾಗಿ ಇದೆ.

**ಪಂಡಿತ**—ನಾವು ಅಂದರೆ ಯಾರು ಸ್ವಾಮಿ?

**ವೆಂಕಟ**—ನಮ್ಮ ಗುರುಗಳಾದ ಸೂಕ್ಷ್ಮಬುದ್ಧಿ ಕೊನೆಗಾಣದ ಕಪ್ಪೆಯ್ಯನವರು ಮತ್ತು ನಾನು.

ಯಶೊ—ಹಾಗಾದರೆ ನಿಮ್ಮಿಬ್ಬರಿಗೂ ನನಗೆ ಹಿತೋಪದೇಶವನ್ನು ಮಾಡ ಬೇಕೆಂಬ ಕುತೂಹಲವೊ ?

ವೆಂಕಟ—ಹೌದು.

ಯಶೊ—ಹೇಳಿ ತಿಳಿದುಕೊಳ್ಳಬೇಕಾದ ವಿಷಯವಾದರೆ ತಿಳಿದುಕೊ ಳ್ಳೋಣ.

ವೆಂಕಟ—ನಮ್ಮ ಗುರುಗಳ ಮತವೇ ನಮ್ಮ ಮತವಾದುದರಿಂದ ನಿಮಗೆ ಹೆಚ್ಚು ಹೇಳಬೇಕಾದ್ದಿಲ್ಲ. ನಮ್ಮವರ ಕಟ್ಟಳೆಗಳ ಮೇರೆ ನಿಮ್ಮ ನಾಟಕದಲ್ಲಿ ಪ್ರಾಚೀನ ನಾಟಕಗಳ ಹಾಗೆ ಕಥಾಸಂವಿ ಧಾನವಿಲ್ಲ. ಪ್ರಾಚೀನ ನಾಟಕಗಳ ಹಾಗೆ ನವರಸಗಳಿಲ್ಲ. ಪೂರ್ವಾ ಚಾರವನ್ನು ಬಿಟ್ಟು ಹೊಸವಿಧವಾಗಿ ಬರೆಯುವದು ನಮಗೆ ರುಚಿಸುವುದಿಲ್ಲ.

ಯಶೊ—ಅತ್ತರೆ ಹಿಂದಿನ ಹಾಗೆ ಅಳಬೇಕು. ನಕ್ಕರೆ ಹಿಂದಿನ ಹಾಗೆ ನಗ ಬೇಕು. ಈ ನಿಮ್ಮ ಪ್ರಾಚೀನ ಕರ್ಮಕ್ಕೆ ನಾವೇನು ಮಾಡು ವುದು ? ಅದಕ್ಕೆ ಏನೂ ನಿಮ್ಮ ಗುರುಗಳ ಕೈಲಿ ಏನುಸಾಗದೆ ಹಿಂದಲೇಟು ಹೊಡೆಯುವದು. ನಿಮ್ಮವರು ಬರೆಯುತ್ತೇನೆಂದು ಹೇಳಿದ ಗೂಢೇಂದು ಪುರಾಣವು ಸಾಂಗವಾಯಿತೋ ? ಯಾರೋ ಹೇಳುತ್ತಿದ್ದರು, ಕಥಾನಾಯಕನು ಕುಳಿತುಕೊಂಡು ಅಳಬೇ ಕೋ ನಿಂತುಕೊಂಡು ಅಳಬೇಕೋ ಎಂಬುದನ್ನು ಯೋಚಿಸುತ್ತ ಕುಳಿತುಕೊಂಡರೆಂದೂ, ಇನ್ನೂ ಬಗೆಹರಿಯದೆ ನಿಮ್ಮ ಗುರುಗ ಳು ಕಥಾನಾಯಕನೊಡನೆ ತಾವೂ ಅಳುತ್ತಿರುವರೆಂದೂ ಯಾ ರೋ ಹೇಳುತ್ತಿದ್ದರು.

ವೆಂಕಟ—ಸರಿಹೋಯ್ತು. ನಾವು ಹಿತವನ್ನು ನುಡಿದರೆ ಅದು ನಿಮಗೆ ರುಚಿಸುವದಿಲ್ಲ. ನಮ್ಮ ಗುರುಗಳು ಶಿಷ್ಯಾರ್ಜನೆಗೆ ಮದಗಡಕ್ಕೆ ಹೋಗಬೇಕೆಂದಿದಾರೆ. ಎಲ್ಲವನ್ನೂ ಸಿದ್ಧಗೊಳಿಸಬೇಕು ಹೋ ಗುತ್ತೇನೆ. (ಹೋಗುವನು).

ಯಶೋ—ಹೊರಡಿ. "ಯಥಾಗುರುಃ ತಥಾಶಿಷ್ಯಃ." ನನಗೀಗ ಉಭಯ ಸಂಕಟಕ್ಕಿಟ್ಟುಕೊಂಡಿದೆ. ಇತ್ತ ರಾಜನ ಆಶ್ರಯ, ಸಂಭಾವನೆ, ಮರ್ಯಾದೆ ಮುಂತಾದ್ದನ್ನು ಬಿಡುವುದಕ್ಕಿಲ್ಲ. ಅತ್ತ—ಬಿಟ್ಟು ಬಿಡುವುದಕ್ಕೂ ಇಲ್ಲ. ಮನಸ್ಸು ಕೊರಗಿಹೋಗುತ್ತೆ. (ತೆರೆಕಡೆ ನೋಡಿ) ಈ ಕಡೆಯೇ ಆಕೆಯು ಬರುವಹಾಗಿದೆ.

ಚಮೇಲಿ—(ಚಿಂತಾಕ್ರಾಂತಳಾಗಿ ಕಣ್ಣೀರು ಸುರಿಸುತ್ತಾ ಪ್ರವೇಶಿಸುವಳು).

ಯಶೋ—ಹೃದಯವೇ, ಇದೇಕೆ ಹೀಗೆ ವ್ಯಸನಪಡುವೆ?

ಚಮೇಲಿ—(ನಿಶ್ಶಬ್ದ).

ಯಶೋ—ನಾನು, ಯಶೋಧರ ಪಂಡಿತ?

ಚಮೇಲಿ—ಪಂಡಿತರೆ, ನನ್ನ ವ್ಯಸನವನ್ನು ಏನೆಂದು ಹೇಳಲಿ? ರಾಜಾವು ಕಾರಣವಿಲ್ಲದೆ ಕ್ರೋಧವುಳ್ಳವರಾಗಿ ರಾಣಿಯವರಿಗೆ ಹಲವು ಬಗೆಯ ದುರ್ಭಾಷೆಗಳನ್ನು ನುಡಿದು ರಾಜಗೃಹದಿಂದಟ್ಟಿಬಿಟ್ಟರಷ್ಟೆ. ಆ ಸಮಯದಲ್ಲಿ ನಾನು ಅಲ್ಲಿ ಇರಲಿಲ್ಲ. ಆದುದರಿಂದ ಮಹಾರಾಣಿಯವರು ಎಲ್ಲಿ ಹೋದರೋ ಜೀವಸಹಿತವಿರುವರೋ ತಿಳಿಯಲಾರೆನು. ಚಂಪೆಯು ಸಹ ಎಲ್ಲಿ ಮಾಯವಾದಳೋ ಗೊತ್ತಿಲ್ಲ. ಹೀಗೆ ಸಖಿಯನ್ನೂ, ಸ್ವಾಮಿನಿಯನ್ನೂ ಏಕಕಾಲದಲ್ಲಿ ಕಳೆದುಕೊಂಡೆನಾದುದರಿಂದ ದುಃಖವು ದುಸ್ಸಹವಾಗಿದೆ. ಪಂಡಿತರೇ, ಇದೇನು, ನೀವು ಸಹಾ ಮುಖದಲ್ಲಿ ಕಳೆಗುಂದಿದವರಾಗಿರುತ್ತೀರಿ? ಆ ದಿನ ನಿಮ್ಮ ಶೈವಮತಖಂಡನ ಮಾಡಿದೆನಲ್ಲಾ ಆ ಕೊರಗಣೆಯು ನಿಮ್ಮ ಹೃದಯದಲ್ಲಿ ನಿಂತುಬಿಟ್ಟಹಾಗಿದೆ.

ಪಂಡಿತ—ನಿನಗೆ ಪರಾಜಿತನಾದುದಕ್ಕೆ ನನಗೇನೂ ವ್ಯಸನವಿಲ್ಲ. ಆ ದಿನ ತರ್ಕಮಾಡುವ ಕಾಲದಲ್ಲಿ ನೀನೊಂದು ಮಾತನ್ನು ಆಡಿದೆ. ಅದು ನನ್ನ ಮನಸ್ಸಿನಲ್ಲಿ ನಾಟಬಿಟ್ಟಿದೆ.

ಚಮೇಲಿ—ಅದೇನು ನಾನೆಂದ ನಿಷ್ಠುರವಾದ ಮಾತು?

ಯಶೋ—ನಿಷ್ಠುರವಲ್ಲ, ನಿಷ್ಠುರವಲ್ಲ. ಆ ದಿನ ಶಿವನೂ ವಿಷ್ಣುವೂ ಒಂದೆಯೆಂದೂ, ಮತಭೇಧವು ಮನುಷ್ಯನ ಉದರಭರಣಾರ್ಥವಾಗಿ ಮಾಡಿದ ಕಲ್ಪನೆಯೆಂದೂ ಹೇಳಿದೆ. ಆ ಮಾತು ನನ್ನ ಮನಸ್ಸಿಗೆ ಅಂಟಿ, ಹಗಲಿರುಳೂ ಅದೇ ಯೋಚನೆಯಲ್ಲಿದ್ದೇನೆ.

ಚಮೇಲಿ—ನನ್ನಂತೆಯೆ ಕೊನೆಗೆ ಬಂದಿರಿ.

ಯಶೋ—ಇಲ್ಲದೆ ಉಂಟೆ. ನಾನು ಶೈವನು, ನೀನು ವೈಷ್ಣವಿಯು. ನಾವಿಬ್ಬರೂ ಬೇರೆ ಬೇರೆಯೆಂಬುದು ನಿನ್ನ ಮಾತಿನಂತೆಯೇ ಮನಸ್ಸಿನ ಕಲ್ಪನೆ. ನಾವಿಬ್ಬರೂ ಒಂದೆಯಾಗಿರಬೇಕೆಂಬ ಯೋಚನೆಯು ನನ್ನ ಮನಸ್ಸಿನಲ್ಲಿ ಹುಟ್ಟಿದೆ. ಅದೇ ಲೋಕಸಮ್ಮತವಾದ ಅಭಿಪ್ರಾಯ.

ಚಮೇಲಿ—ಪಂಡಿತರೇ, ನಿಮ್ಮ ಮಾತಿಗೆ ತಡೆಯಿಲ್ಲ. ನನಗೆ ಬಿಡುವಿಲ್ಲ. ನಿಮಗೆ ಯೋಚನೆಯು ಸಮರ್ಪಕವಾಗಿದ್ದರೂ ಈಗ ಸಾಧ್ಯವಿಲ್ಲ.

ಯಶೋ—ಏಕೆ ?

ಚಮೇಲಿ—ನಮ್ಮ ಮಹಾರಾಣಿಯವರಿಗೆ ಕ್ಷೇಮವುಂಟಾಗುವವರೆಗೂ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಶಪಥ ಮಾಡಿರುವೆನು. ದೇವಿಯರಿಗೆ ಪ್ರಿಯವಾಗಿದ್ದ ಗೋಕುಲಬೃಂದಾವನಕ್ಕೆ ಹೋಗುವೆನು. ದೇವಿಯರಿಗೆ ಸುಖವಾದರೆ ನಿಮ್ಮಿಷ್ಟಾರ್ಥವು ನೆರವೇರುವುದು. ಇಲ್ಲವೆ ಕೃಷ್ಣಪರಮಾತ್ಮನ ಸೇವೆಯಲ್ಲೇ ಈ ನನ್ನ ಆಯುಶ್ಶೇಷವನ್ನು ಕಳೆಯುವೆನು. ನನ್ನದು ದೃಢಸಂಕಲ್ಪವು. ನೀವು ಸುಮ್ಮನೆ ಚರ್ಚೆಮಾಡಿ ನನ್ನ ಮನೋವ್ಯಥೆಯನ್ನು ಹೆಚ್ಚಿಸಬೇಡಿ. ಇದೋ ಹೋಗಿಬಿಟ್ಟುಬರುತ್ತೇನೆ. ನಿಮಗೆ ನನ್ನ ಪ್ರಣಾಮವಿರಲಿ. (ಹೋಗುವಳು).

ಯಶೋ—ಇನ್ನು ನಾನು ಮಾಡುವುದಾದರೂ ಏನು ? ಕುಂಭರಾಣಾವಿಗೂ ಸಂಭಾವನೆಗೂ ನಮಸ್ಕಾರ ಹಾಕಿಬಿಟ್ಟು ಅವಳ ಹಿಂದೆಯೇ

ಹೋಗುತ್ತೇನೆ. ಹರಿಹರಮೂರ್ತಿಯ ಇಚ್ಛೆಯಿದ್ದಂತಾಗಲಿ. (ಹೋಗುವನು).

(ತೆರೆಯು ಏಳುವುದು).

---

೯ ನೇ ರಂಗ.

(ಯಮುನಾ ತಟದಲ್ಲಿ ವಿನಾರಾಬಾಯಿಯು ದುಃಖಪಡುತ್ತ ನಿಂತಿರುವಳು).

ವಿನಾರಾ— ರಾಗ—ಕಾನಡ. ತಾಳ—ರೂಪಕ.

(ಪ) ಶ್ರೀಧರ ದಾಮೋದರ ಕಾಯೋ ಗಿರಿಧಾರಿ ॥

(ಅ) ವಾಸುದೇವ, ಜಗದಾಧಾರ, ವಾರಿಜನೇತ್ರ ಹರೆ ॥

ತಂದೆಯ ಮನೆಯಲ್ಲಿ ಸಾಧುವು ಅಂದು ಹೇಳಿದ್ದು ಪ್ರಾಪ್ತವಾಯಿತು. ಕೈಹಿಡಿದ ಸ್ವಾಮಿಯು ನನ್ನ ಸತೀತ್ವದಲ್ಲಿ ದೋಷವನ್ನೆಣಿಸಿದನು. ಆತನಿಗೆ ಈ ದೇಹವು ಬೇಡವಾದುದಾಯಿತು. ಇನ್ನು ನಾನು ಮಾಡುವದೇನು ? ಕುಂದನ್ನು ಕಂಡದ್ದೇ ಆದರೆ ತಂದೆಯು ಕೂಡ ತಳ್ಳುವನೆಂದ ಮೇಲೆ ನಾನು ಮಾಡುವುದಾದರೂ ಏನು ಉಳಿದಿರುವುದು ? ನಾನು ಯಾರಲ್ಲಿ ಮೊರೆಯಿಡಲಿ ? ಯಾವ ಅಭುಕ್ತ ಮೂಲೆಯಲ್ಲಿ ಅಡಗಿಹೋಗಲಿ ? ಗೃಹತ್ಯಾಗಿಯಾದೆನು. ಪತಿಯಿಂದ ನಿರಾಕರಿಸಲ್ಪಟ್ಟೆನು. ಇನ್ನೇನು ಸರ್ವಸ್ವವನ್ನೂ ಬಿಟ್ಟಹಾಗಾಯಿತು. ಮುಖ್ಯವಾಗಿ ಭಕ್ತಪರಾಧೀನನಾದ ಗೋವರ್ಧನಧಾರಿಯೇ ಕೈಬಿಟ್ಟಮೇಲೆ ಮಿಕ್ಕವರು ಬಿಡುವುದೇನಾಶ್ಚರ್ಯವು ?

(ಚ) ದೀನದಯಾಪರ ಧರ್ಮನ್ಯಾಯನಿರತ ಕರ್ಮಕೆ ಕೈಬಿಡದೆ ॥

ಹಾ ! ಪತಿಯು ಏನಪ್ಪಣೆ ಮಾಡಿದನು ? ಸತೀತ್ವಭಂಗಕ್ಕೆ ಮರಣವೇ ಶಿಕ್ಷೆಯೆಂದನು. ಪತಿಯೇ ಪರದೈವವೆಂದು ನಂಬಿರುವ ನನಗೆ ಆತನ ಅಪ್ಪಣೆಯು ಒಪ್ಪೋ, ಇಲ್ಲವೆ ತಪ್ಪೋ, ಹೇಗಾದರೂ ಅನುಲ್ಲಂಘನೀಯವು. ಆದುದರಿಂದ ನನಗೆ ಮರಣವೇ ನಿಶ್ಚಯವು. ಇದು ನನ್ನ ಕರ್ಮವು. ಕರ್ಮವು ಹರಿಹರಬ್ರಹ್ಮಾದಿಗಳನ್ನೂ ಬಿಡಲಿಲ್ಲವು. ಸಕಲಲೋಕವೂ ಪರಿ

ಶುದ್ಧಾತ್ಮಕಳೆಂದು ಹೊಗಳುತ್ತಿದ್ದರೂ, ಶ್ರೀ ರಾಮಚಂದ್ರನೇ ಮನಸಾ ಪರಿಶುದ್ಧಾತ್ಮಕಳೆಂದು ತಿಳಿದಿದ್ದರೂ ಕರ್ಮವು ಬೆನ್ನುಹತ್ತಿ ಲೋಕಮಾತೆಯಾದ ಸೀತಾದೇವಿಯನ್ನು ಅರಣ್ಯಕ್ಕೆ ಅಟ್ಟಿತು. ತನುಮನೋವಾಕ್ಕಾಯ ಕರ್ಮಗಳಲ್ಲೂ ನಿರ್ದೋಷಿಯಾದ ನಾನು ಹೀಗೆ ದೋಷಾರೋಪಣೆಗೆ ಆಸ್ಪದಳಾಗಿ ಕ್ರೂರದಂಡನೆಗೆ ಪಾತ್ರಳಾದುದ ನನ್ನ ಕರ್ಮವು.

ನಿಷ್ಟುರಕರ್ಮವಶಳಾದರೂ ಶ್ರೀ ಸೀತಾದೇವಿಯು ಶ್ರೀ ರಾಮಚಂದ್ರನ ಆಜ್ಞೆಯನ್ನು ಶಿರಸಾವಹಿಸಿ ನೆರವೇರಿಸಿ ನಾರೀಕುಲಕ್ಕೆ ಆದರ್ಶಪಾತ್ರಯಳಾಗಿರುವಳು.

ನನ್ನ ಪತಿಯ ಅಪ್ಪಣೆಯಂತೆ ನನ್ನ ಪ್ರಾಣವನ್ನು ನೀಗಿ ನನ್ನ ಕರ್ಮವನ್ನು ಸಫಲಗೊಳಿಸುವೆನು. ಈ ಯಮುನಾ ನದಿಯ ಪವಿತ್ರಜಲದಲ್ಲಿ ಪ್ರಾಣವನ್ನು ಬಿಡುವೆನು. ತಾಯೇ, ನಿನ್ನ ಗರ್ಭದಲ್ಲಿ ನನ್ನನ್ನು ಧರಿಸಿಕೊಂಡು ನನ್ನ ಮಾನಸಂರಕ್ಷಣೆಯನ್ನು ಮಾಡು.

ರಾಗ—ಷಣ್ಮುಖಪ್ರಿಯ. ತಾಳ—ರೂಪಕ.

(ಪ) ಕಾಯೆ ಕಾಳಿಂದಿ ತಾಯೆಸುಶೀಲೆ । ನೀಲನಿರ್ಮಲಸಲಿಲೆ
ದೇವಿಯಮುನಾ ||

(ಅ) ಭಾನುತನಯೆ ಕಾಲಸಹೋದರಿ ಘನಾಘನಾಶಿನಿ ದೇವಿಯ
ಮುನಾ ||

(ಚ) ಚಾರುಚರಿತೆ ಹರಿಪಥದಾತೆ ಲೋಕಪಾವನಿ ದೇವಿಯ
ಮುನಾ ||

ಹಾ ! ಗೋವರ್ಧನಧಾರಿ, ಇದೋ ಬಂದೆನು !

ರಾಗ — ಮುಖಾರಿ. ತಾಳ—ಛಾಪು.

||ಪ|| ಮುಕುಂದ ಮುಕುಂದ ಮುಕುಂದ ಬಂದೆ ||

||ಅ|| ಮುನಿಸತಿ ಶಾಪವಮಾಣ್ದೆ ಶಬರಿಗೆಮಾರ್ಗವ ತೋರ್ದೆ
ವೇದವತಿಗಿಷ್ಟೆಯನೀಳ್ದೆ ದ್ರೌಪದಿ ಮಾನವ ಕಾದೆ ||

(ಮೀರಾಬಾಯಿಯು ಯಮುನೆಯಲ್ಲಿ ಬೀಳುವಳು. ಕೃಷ್ಣಪರಮಾತ್ಮನು ಯಮುನಾಮಧ್ಯದಿಂದ ಅಚೇತನಳಾದ ಮೀರಾಬಾಯಿಯನ್ನು ಕೈಗಳಲ್ಲಿ ಎತ್ತಿಕೊಂಡು ಏಳುವನು. ತೆರೆಯು ಜಾರುವುದು).

ಪ್ರಥಮಾಂಕ ಸಂಪೂರ್ಣಂ.

---

## ದ್ವಿತೀಯಾಂಕ.

### ೧ ನೇ ರಂಗ.

(ಮೇವಾಡದ ರಾಜಭವನದಲ್ಲಿ ಕುಂಭರಾಣನು ಚಿಂತಿಸುತ್ತಾ ಪ್ರವೇಶಿಸುವನು).

ಕುಂಭ—

ಕಂದ ॥ ಪರಿಕಿಸದೆ ನಿಜಸ್ಥಿತಿಯಂ ।
ಚರಣಕ್ಕೆಡೆಗೊಟ್ಟ ಕೊಂಬೆಯನೆ ಕಡಿವವನೊಲ್ ॥
ಮರುಳಿಂ ವಧಿಸಿ ವನಿತೆಯಂ ।
ಪರಿತಪಿಪೆಂನ್ಯಾಯಧರ್ಮನಿರತಂಗಡನಾಂ ॥

ಏನಾಗಿಹೋಯಿತು ? ಒಂದು ಜೀವವಿಲ್ಲದ ಮಾತ್ರಕ್ಕೆ ಏನಾಗಿ ಹೋಯಿತು ? ಜನಭರಿತವಾದಾಗ್ಯೂ ಈ ಮೇವಾಡವು ನಿರ್ಜನವಾದಂತೆ ನಿಶ್ಶಬ್ದವಾಗಿರುವದು. ಗಗನವನ್ನು ಧಿಕ್ಕರಿಸುತ್ತಲಿದ್ದ ಪ್ರಜೆಗಳ ಆನಂದದ ಕೋಲಾಹಲವು ಅಡಗಿಹೋಗಿರುವದು ಪ್ರಭುಸೇವಕ ಕರ್ತವ್ಯಬಲದಿಂದ ಸರ್ವರೂ ತಮ್ಮ ತಮ್ಮ ಕಾರ್ಯಗಳನ್ನು ಮಾಡುತ್ತಲಿದ್ದರೂ, ನಾನು ಕೇಳಿದ ಪ್ರಶ್ನೆಗೆ ಮಾತ್ರ ಅವಶ್ಯವಿದ್ದಲ್ಲಿ ನಿರ್ವಾಹವಿಲ್ಲದೆ ಪ್ರತ್ಯುತ್ತರಗಳನ್ನು ಕೊಡುತ್ತಾ ಮೂಕರಂತೆ ಮೌನವಾಗಿರುವರು. ಉತ್ಸಾಹರಹಿತರಾಗಿ, ವಿಷಣ್ಣವದನರಾಗಿ, ಆಕ್ಷೇಪಸೂಚಕವೀಕ್ಷಣದಿಂದ ನನ್ನನ್ನು ನೋಡುವರು. ಇದಕ್ಕೆ ಕಾರಣನು ನಾನೇ ? ನಾನಲ್ಲದಿದ್ದರೆ ಈ ಪರಿತಾ

ಪವು ನನ್ನ ಹೃದಯವನ್ನೇಕೆ ದಹಿಸುತ್ತಲಿದೆ? ನಾನು ಮಾಡಿದ ಕೃತ್ಯವು ಸಾಧುವೆ? ತನ್ನ ವಿಜ್ಞಾಪನೆಯನ್ನು ಲಾಲಿಸದೆ ದಂಡನೆಯನ್ನು ವಿಧಿಸುವ ದು ಧರ್ಮವಲ್ಲವೆಂದು ಮೀರಾವು ಹೇಳಿದಾಗ್ಯೂ ಕೇಳದೆ ಅಂತಹ ಕ್ರೂರ ಶಿಕ್ಷೆಯನ್ನು ವಿಧಿಸಿದುದು ನ್ಯಾಯವೆ? ಅನ್ಯಾಯದಿಂದಲೂ, ಅಧರ್ಮದಿಂದ ಲೂ ನಡೆಯುವದು ಸ್ವಚ್ಛಕುಲಕ್ಕೆ ಕಳಂಕವಲ್ಲವೇ ?

ಶ್ರೀ ರಾಮಚಂದ್ರನನ್ನು ಸಾಮತಿಗಿಟ್ಟುಕೊಂಡು, ಆತನು ಸೀತಾ ದೇವಿಯನ್ನು ತ್ಯಜಿಸಿದಂತೆ ನಾನೂ ಮೀರಾಬಾಯಿಯನ್ನು ತ್ಯಜಿಸಿದೆನು. ಶ್ರೀ ಸೀತಾದೇವಿಯು ಅರಣ್ಯದಲ್ಲಿ ಬಿಡಲ್ಪಟ್ಟುದುದರಿಂದ ಶ್ರೀ ರಾಮನೊ ಡನೆ ಆಕೆಗೆ ಪುನಃ ಸಮಾಗಮವುಂಟಾಯಿತು. ನಾನು ವಿಧಿಸಿದ ಕ್ರೂರ ದಂಡನೆಯಿಂದ ಇಹಲೋಕವನ್ನೇ ತ್ಯಜಿಸಿದ ಮೀರಾಬಾಯಿಯನ್ನು, ಆಕೆ ಯು ನಿರ್ದೋಷಿಯಾಗಿದ್ದಲ್ಲಿ, ನಾನು ಪುನಃ ಪರಲೋಕದಲ್ಲಿ ತಾನೇ ಕಾಣಲಾಗುವದು. ಆಹಾ, ಮೌಢ್ಯವು ಮಾನವನನ್ನು ಯಾವಗತಿಗೆ ತರು ವದು! ಆಗಿಹೋಯಿತು. ಇನ್ನು ಮೀರಾವು ದೋಷಿಯಾದರೆ ಏನು, ನಿರ್ದೋಷಿಯಾದರೆತಾನೆ ಏನು ?

(ಸೇನಾನಾಯಕನಾದ ರಣಧೀರನು ಪ್ರವೇಶಿಸುವನು).

ರಣ—ರಾಣಾರವರಿಗೆ ವಿಜಯವು.

ಕುಂಭ—ರಣಧೀರ, ಶತ್ರುವಿನ ಸಮಾಚಾರವೇನು ?

ರಣ—ಪ್ರಭೋ, ಅಕ್ಬರನು ಹೊಸ ಸೈನ್ಯವನ್ನು ತರಿಸಿ ಮೇವಾಡವನ್ನು ಸಂಪೂರ್ಣವಾಗಿ ಪ್ರಸರಣ ಮಾಡಿರುವನು. ರಾಥೋಡದ ಸೈನ್ಯ ವನ್ನು ನಾವು ಜತೆಗೂಡಿಸೋಣನೆಂದರೆ ಮೇವಾಡಕ್ಕೂ, ರಾ ಥೋಡಕ್ಕೂ ಮಧ್ಯೆ ಇರುವ ಪರ್ವತಶ್ರೇಣಿಯನ್ನು ಅಕ್ಬರನ ಸೈನ್ಯವು ಆಕ್ರಮಿಸಿಕೊಂಡು ಕುಳಿತಿರುವುದು. ಆದುದರಿಂದ ರಾಥೋಡದ ಸಹಾಯವು ಅಲಭ್ಯವು. ನಮ್ಮ ಈ ಮೇವಾಡ ವೊಂದೇ ಅಕ್ಬರನ ಈ ಅತುಳ ಸೈನ್ಯದೊಡನೆ ಹೋರಾಡಬೇ ಕಾಗಿದೆ. ಸಂಗ್ರಾಮಶೂರರೂ, ಅಪ್ರತಿಮವೀರರೂ ಆಗಿದ್ದರೂ

ನಮ್ಮ ಸೇನಾಜನರು ಪ್ರಕೃತದಲ್ಲಿ ದೈವೇಚ್ಛೆಯಿಂದ ರಣೋತ್ಸಾಹರಹಿತರಾಗಿರುವರು. ಆದರೂ ಎಲ್ಲಿಗೆ ಕರೆದರೆ ಅಲ್ಲಿಗೆ ಬರುವರು.

ಕುಂಭ—ಕಾರಣ ಪ್ರ ನನ್ನಲ್ಲೇ ಇರುವುದು. ಆದುದು ಆಗಿಹೋಯಿತು. ರಣಛೋಡ, ಇಂತಹ ಸೈನ್ಯವನ್ನು ಶತ್ರುವಿನ ಮೇಲೆ ಹೊರಡಿಸಲು ನನಗೆ ಮನಸ್ಸು ಒಪ್ಪದು. ಮೃತ್ಯುವಿಗೆ ನಾನಾಗಿ ಬಲಿಕೊಟ್ಟಂತೆ ಆಗುವುದು. ಈ ಅನಂತ ನರಹತಿಯನ್ನು ಮಾಡಿ ಪಾಪರಾಶಿಯನ್ನು ನನ್ನ ತಲೆಯ ಮೇಲೆ ಧರಿಸಿಕೊಳ್ಳಲಾರೆನು. ಈಗ ಆಗಿರುವುದೇ ಸಾಕು.

ರಣ—ಮಹಾರಾಜ, ಐರೋಪ್ಯದಿಂದ ಹೊಸದಾಗಿ ಶತಮುಖಿ ಪಿರಂಗಿಗಳನ್ನು ಅಕ್ಬರನು ತರಿಸಿರುವನಂತೆ. ನಾಳೆ ಸಂಧ್ಯೆಯೊಳಗೆ ಮೇವಾಡದ ಕೋಟೆಯು ತನ್ನ ಕೈವಶವಾಗದಿದ್ದರೆ ಆ ಪಿರಂಗಿಗಳಿಂದ ಸುಟ್ಟುಬಿಡುವನಂತೆ.

ಕುಂಭ—ಇರಬಹುದು, ಇರಬಹುದು. ರಣಛೋಡ, ಮನಸ್ಸಿನಲ್ಲಿ ಒಂದು ದೃಢಸಂಕಲ್ಪವನ್ನು ಮಾಡಿದ್ದೇನೆ. ಇಂದಿನ ರಾತ್ರಿಯೇ ನಾನೊಬ್ಬನೇ ಈ ಮೇವಾಡದ ಕೋಟೆಯನ್ನು ತ್ಯಜಿಸಿಬಿಡುತ್ತೇನೆ. ನನ್ನ ಕುಲಶತ್ರುವಾದ ಆ ಅಕ್ಬರನನ್ನು ಎಲ್ಲಿದ್ದರೂ ಹುಡುಕಿ ಸಂಹಾರ ಮಾಡುವೆನು. ಇಲ್ಲವೇ ನಾನಾದರೂ ಮೃತಿಯನ್ನೈದುವೆನು.

ರಣ—ಮಹಾಪ್ರಭೋ, ಕ್ಷಮಿಸಬೇಕು. ತಮ್ಮೊಡನೆ ನಾನೂ, ಹಂವೀರನೂ, ಸೇನನೂ ಬರುವದಕ್ಕೆ ಅಪ್ಪಣೆಯನ್ನು ಕರುಣಿಸಬೇಕು. ನಮ್ಮ ಕೈಲಾದಷ್ಟು ಶತ್ರುಗಳನ್ನು ಕಡಿದು ತಮ್ಮ ವೈರವನ್ನು ಸಾಧಿಸುವೆವು. ತಮ್ಮ ಸೇವಕರಾದ ನಾವು ಯುದ್ಧದಿಂದ ವಿಮುಖರಾಗಲಾರೆವೆಂದು ಬಿನ್ನವಿಸಿಕೊಳ್ಳುತ್ತೇನೆ.

ಕುಂಭ—ರಣಛೋಡ, ಪರಿಣಾಮವನ್ನು ನೀನೇ ಊಹಿಸಬಲ್ಲೆ. ಅಂದು ಯವನನಿಂದ ಮೇವಾಡದ ಅರಸರ ಸ್ವಚ್ಛಕುಲವು ಕಳಂಕಿತವಾ

ಯಿತು. ಇಂದು ಯವನನಿಂದ ಮೋಸವಾಡಿವ್ರ ಆಕ್ರಮಿಸಲ್ಪಡಬಹು ದು. ನನ್ನನ್ನು ಹಿಂಬಾಲಿಸಲಿಚ್ಛೈಸುವ ನಿಮ್ಮ ಪ್ರಾಣಗಳು ನನ್ನ ಜೀವದೊಡನೆ ಇಹಲೋಕವನ್ನೇ ಬಿಡುವಂತೆ ಯವನರಿಂದ ಮಾಡಲ್ಪಡಬಹುದು. ರಣಛೋಡ, ಇದನ್ನು ಯೋಚಿಸಿರುವೆ ಯಾ ? ಇವೆಲ್ಲಕ್ಕೂ ಕಾರಣನು ನಾನೇ ಎಂಬುದನ್ನಾದರೂ ಯೋ ಚಿಸಿರುವೆಯಾ ?

ರಣ—ಪ್ರಭೋ, ಅದು ಹೇಗಾದರೂ ಆಗಲಿ. ಪ್ರಕೃತದಲ್ಲಿ ನಾವು ಬರದಿ ರುವುದೂ ತಾವು ತಡೆಯುವುದೂ ಧರ್ಮವಲ್ಲವು. ಆದುದರಿಂದ ತಮ್ಮೊಡನೆ ಬರುವಂತೆ ಅನುಜ್ಞೆಯನ್ನು ಕಟಾಕ್ಷಿಸಬೇಕು.

ಕುಂಭ— ನಿಮ್ಮಿಷ್ಟ. ಪರಿಣಾಮವು ಭಗವಂತನಿಗೆ ಸೇರಿದ್ದು. ರಣಛೋ ಡ, ನೀನು ಹೊರಡು. ನೀವು ಮೂರು ಜನರೂ ಸನ್ನದ್ಧರಾಗಿ ಸಾಧುಗಳು ತಿರುಗಾಡುವ ಮಾರ್ಗದಲ್ಲಿರಿ. ಒಂದು ಮುಹೂರ್ತದ ವರಿವಿಗೂ ಇಷ್ಟದೇವತೆಯನ್ನು ಪ್ರಾರ್ಥಿಸಿ, ನಿಮ್ಮೊಡನೆ ಬಂದು ಸೇರಿಕೊಳ್ಳುವೆನು. (ಹೋಗುವರು).

(ತೆರೆಯು ಬೀಳುವುದು).

---

೨ ನೇ ರಂಗ.

(ಯಮುನಾ ತೀರದ ವನದಲ್ಲಿ, ಮೀರಾ ಮತ್ತು ವೇಬರ್ ಪ್ರವೇಶಿ ಸುವರು).

ಮೀರಾ— ರಾಗ—ಪ್ಸೀಲು. ತಾಳ—ಏಕ.

(ಪ) ಹೇ ಯದುನಾಥಾ ಏನನುಗೈದೆ । ಭಕ್ತಮನೋರಥದಾತ ॥

(ಅ) ಮರಣವಕೋರಿ | ಜಲದೊಳುಮುಳುಗಿದೆ | ಹರಣವನುಳಿಸೆ ನೀ । ನಪಲಾಕೊಳಗಾದೆನಾಂ ॥

ವಿಾರಾ—ಕುಮಾರ, ನಿಜವಾಗಿ ಹೇಳು ? ಯಮುನಾ ನದಿಯ ಪವಿತ್ರ ವಾದ ಜಲದಲ್ಲಿ ಬಿದ್ದ ನನ್ನನ್ನು ನೀನು ತಟಕ್ಕೆ ತಂದು ಜೀವವನ್ನು ಳಿಸಿದೆಯಾ ?

ವೇಬರ್—ತಾಯಿ, ನನಗೆ ತಿಳಿಯದೆಂದು ಆಗಲೇ ಅರಿಕೆಮಾಡಿಕೊಂಡೆ ನು. ತಾಯಿ ! ಗುರುಕುಲವಾಸದ ಕಾರ್ಯಾರ್ಥವಾಗಿ ಅಮೃತಸ ರಕ್ಕೆ ಹೋಗಿದ್ದ ನಾನು ಮರಳಿ ತಮ್ಮ ದರ್ಶನವನ್ನು ಮಾಡಬೇ ಕೆಂದು ಮೇವಾಡಾಭಿಮುಖನಾಗಿ ಹೊರಟೆನು. ಹಾಗೆಯೇ ಬರು ತ್ತಿರಲು ಯಮುನಾ ತೀರದಲ್ಲಿ ಒಂದು ನಿರ್ಜನವಾದ ರಮ್ಯಸ್ಥಳ ದಲ್ಲಿ ಎಳೆಯದಾದ ವಟಪತ್ರಗಳ ಶಯ್ಯೆಯ ಮೇಲೆ ತಾವು ಮಲಗಿ ದ್ದುದನ್ನು ನೋಡಿ ಮೊದಲು ಆನಂದವನ್ನು ತಾಳಿದೆನು. ಕೂಡಲೇ ಆಶ್ಚರ್ಯವೂ, ವಿಸ್ಮಯವೂ, ಶೋಕವೂ ಉದ್ಭವಿಸಿದವು. ಹಾಗೆ ಯೇ ತಮ್ಮ ಪಾದಗಳನ್ನು ನೋಡುತ್ತ ನಿಂತುಬಿಟ್ಟೆನು. ಸ್ವಲ್ಪ ಹೊತ್ತಿನೊಳಗೆ ತಮಗೆ ಎಚ್ಚರವಾಯಿತು.

ವಿಾರಾ—ಕುಮಾರಾ ! ನಿನಗೆ ಅಷ್ಟೊಂದು ಭಾವನೆಗಳು ಉತ್ಪನ್ನವಾ ದುವೇಕೆ ?

ವೇಬರ್—ತಾಯಿ ! ತಮ್ಮ ದರ್ಶನಾರ್ಥವಾಗಿ ಹೊರಟ ನನಗೆ ಕ್ಷೇತ್ರ ದಲ್ಲೇ ನಿರಾಯಾಸವಾಗಿ ತಮ್ಮ ದರ್ಶನವು ಲಭಿಸಿದುದಕ್ಕಾಗಿ ಆನಂದವನ್ನು ಹೊಂದಿದೆನು. ಆದರೆ ಮಹಾರಾಣಿಗೆ ಯೋಗ್ಯ ವಾದ ಶಯ್ಯೆಯಲ್ಲಿ ಮಲಗಿ ಸಕಲ ರಾಜಭೋಗವನ್ನೂ ಅನುಭ ವಿಸಬೇಕಾದ ತಾವು ಏಕಾಕಿನಿಯಾಗಿ ಭಿಕಾರಿಯಂತೆ ಕಾಡಿನ ಮಧ್ಯದಲ್ಲಿ ತೃಣಪತ್ರಾದಿಗಳ ಮೇಲೆ ಮಲಗಿರುವುದನ್ನು ನೋಡಿ ಇತರ ಭಾವನೆಗಳು ಉದ್ಭವಿಸಿದವು. ತಾಯಿ, ತಮ್ಮನ್ನು ಈ ದುರವಸ್ಥೆಗೆ ತಂದವರು ದೌರ್ಭಾಗ್ಯರು.

ವಿಾರಾ—ಹಾಗೆನ್ನಬೇಡ ? ನಾನೇ ದೌರ್ಭಾಗ್ಯಳು. ನನ್ನ ಪ್ರಾರಬ್ಧವು ಹೀಗಿರುವಾಗ ಅನ್ಯರನ್ನಂದು ಫಲವೇನು ? ಕುಮಾರಾ, ಸತೀ ತ್ವಭಂಗಕ್ಕೆ ಮರಣವೇ ದಂಡನೆಯೆಂದೂ, ನನ್ನ ಪ್ರಾಣವನ್ನು

ನಾನೇ ನೀಗಿ ಆ ಶಿಕ್ಷೆಯನ್ನು ನಿರ್ವಹಿಸಬೇಕೆಂದೂ ಆರ್ಯಪುತ್ರನು ಅಪ್ಪಣೆಮಾಡಿದನು. ಅದರಂತೆ ನಾನು ಯಮುನಾನದಿಯಲ್ಲಿ ಮುಳುಗಿದೆನು. ನಾನು ಈಗ ಪುನಃ ಬದುಕಿರುವುದ್ದರಿಂದ ಪತಿಯ ಆಜ್ಞೆಯನ್ನು ಉಲ್ಲಂಘಿಸಿದಂತೆ ಆಯಿತು. ಭೇಟಾ, ನನಗೆ ಅವಕಾಶವನ್ನು ಕೊಟ್ಟು ನೀನು ಹೋಗು. ನಾನು ಪತಿಯ ಆಜ್ಞೆಯನ್ನು ನೆರವೇರಿಸಲು ಪುನಃ ಪ್ರಯತ್ನಪಡುವೆನು ?

ವೇಬರ್—ಮಹಾತಾಯಿ, ಸಾಧುಗಳಲ್ಲಿ ಪರಮಸಾಧುವಾದ ತಮ್ಮ ಈ ದುಃಖಕ್ಕೆ ಮಂದಭಾಗ್ಯನಾದ ನಾನೇ ಕಾರಣನು.

ರಾಗ—ಕಲ್ಯಾಣಿ. ತಾಳ— ತ್ರಿಶ್ರ ಏಕ.

(ಪ) ಮಾತೆಯೆ ನೀವೆನ್ನ ಕರುಣಿಸಿ ಕ್ಷಮಿಸಿರಿ ||

(ಅ) ಅರಿಯದೆ ನಾನಂದು ಯವನಗೆ ಮಾರ್ಗವ ತೋರಿ

ಗುರುತರದುಃಖಕೆ ಗುರಿಗೈದೆನಿಮ್ಮ ||

ಮಿರಾ—ವೇಬರ್, ಗೋವರ್ಧನಧಾರಿಯ ವಿಗ್ರಹವು ಮುರಿದು ಹೀಗಾಗಬೇಕೆಂದಿರುವಲ್ಲಿ ನೀನು ಮುಖ್ಯಕಾರಣನು ಹೇಗೆ ಆದೆ ? ನನ್ನ ದಾರಿಯನ್ನು ಹಿಡಿಯುವೆನು.

ವೇಬರ್—ತಾಯಿ, ಕ್ಷಮಿಸಬೇಕು. ತಾವು ಯಮುನೆಯಲ್ಲಿ ಬಿದ್ದಾಗಲೇ ತಮ್ಮ ಪತಿಯ ಆಜ್ಞೆಯು ನೆರವೇರಿತು. ತಮ್ಮ ಸತೀತ್ವ ಪ್ರಭಾವದಿಂದ ತಾವು ಪುನಃ ಜೀವಿಸಿದರೆ ಯಾರೇನು ಮಾಡಬಲ್ಲರು. ತಾವು ಪುನಃ ಈ ಸಾಹಸವನ್ನು ಮಾಡಕೂಡದು. ಇಲ್ಲದಿದ್ದರೆ ಇವೆಲ್ಲಕ್ಕೂ ಕಾರಣನಾದ ನಾನು ಪ್ರಾಣವನ್ನು ಬಿಡುವೆನು.

ಮೀರಾ—ಭೇಟಾ, ಇದೇನು ನೀನಾಡುವ ಮಾತು. ಧರ್ಮಸೂಕ್ಷ್ಮವನ್ನು ನೆಪಮಾಡಿಕೊಂಡು ಪ್ರಾಣಧಾರಣೆ ಮಾಡಬೇಕೇನು ? ಪತಿಯಿಂದ ನಿರಾಕರಿಸಲ್ಪಟ್ಟು ಲೋಕದ ಮಿಥ್ಯಾಭಿಸಂಶನಕ್ಕೆ ಪಾತ್ರಳಾಗಬೇಕೆ ? ಅದು ನನ್ನಿಂದ ಸಾಧ್ಯವಾಗದು. ಅದಕ್ಕಿಂತಲೂ ಮರಣವೇ ಲೇಸೆಂದು ತಿಳಿದಿರುವೆನು.

ವೇಬರ್—ತಮ್ಮಲ್ಲಿ ತರ್ಕಮಾಡಲು ನನಗೆ ಸಾಧ್ಯವಿಲ್ಲ. ಆದರೂ —

(ಅಷ್ಟರಲ್ಲಿ ಮುನಿಕುಮಾರನೊಬ್ಬನು ಪ್ರವೇಶಿಸುವನು).

ಮುನಿಕುಮಾರ—(ತೆರೆಯಕಡೆ ನೋಡಿ) ಭಾರ್ಗವ, ಭಾರ್ಗವ, ಮಾರ್ಗಾಯಾಸದಿಂದ ಬಳಲಿರುವ ಗುರುಗಳನ್ನು ಇತ್ತ ಕರೆದುಕೊಂಡು ಬಾ. (ಸುತ್ತಲೂ ನೋಡಿ) ಇಲ್ಲಿ ಸ್ತ್ರೀಯರು ಯಾರೂ ಇರಕೂಡದು. ನಮ್ಮ ಗುರುಗಳಾದ ಯೋಗಾನಂದ ಮುನಿಗಳು ಸ್ತ್ರೀಯನ್ನು ನೋಡುವುದಿಲ್ಲವೆಂದೂ, ಸ್ತ್ರೀಯೊಡನೆ ಮಾತನಾಡುವುದಿಲ್ಲವೆಂದೂ ವ್ರತವನ್ನು ಕೈಕೊಂಡಿರುವರು. ಅವರು ಇತ್ತಲೇ ಬರುತ್ತಿರುವುದ್ದರಿಂದ ನೀವು ಹೊರಟು ಹೋಗಿ. ಇಲ್ಲಿ ಇರಕೂಡದು. (ತೆರೆಯಕಡೆ ನೋಡಿ) ಭಾರ್ಗವ, ಇಲ್ಲಿ ಸ್ತ್ರೀಯರಿರುವರೆಂದು ಗುರುಗಳವರಿಗೆ ಎಚ್ಚರಿಕೆಯನ್ನು ವಿಜ್ಞಾಪಿಸಿಕೋ ?

ವೇಬರ್—ಮಹಾತಾಯಿ, ಈ ಯೋಗಾನಂದ ಮುನಿಗಳು ಬ್ರಹ್ಮಚಾರಿಗಳೆಂದೂ, ಬ್ರಹ್ಮವೇತ್ತರೆಂದೂ, ಮಹಾಜ್ಞಾನಿಗಳೆಂದೂ ನಮ್ಮ ಗುರುಕುಲವಾಸದ ಸಿದ್ಧರು ಹೇಳುವುದುಂಟು. ಇವರ ದರ್ಶನವು ನಮಗೆ ಲಭಿಸಿದುದು ನಮ್ಮ ಭಾಗ್ಯೋದಯವೇ ಸರಿ. ಇವರನ್ನು ಸಂದರ್ಶಿಸಿ ನಮ್ಮಿಬ್ಬರಿಗೂ ಉಂಟಾಗಿರುವ ಧರ್ಮಸೂಕ್ಷ್ಮದ ಜಿಜ್ಞಾಸವನ್ನು ಇತ್ಯರ್ಥ ಮಾಡಿಕೊಳ್ಳಬಹುದು.

ಮುನಿಕುಮಾರ—ಏನು, ನಾನು ಹೇಳುವುದು ನಿಮಗೆ ಕೇಳಿಸುವುದಿಲ್ಲವೊ ? (ಅಷ್ಟರೊಳಗೆ ಯೋಗಾನಂದ ಮುನಿಯೂ ಶಿಷ್ಯನಾದ ಭಾರ್ಗವನೊಡನೆ ಪ್ರವೇಶಿಸುವನು).

ಭಾರ್ಗವ—ಗುರುಗಳು ಹೀಗೆ ದಯಮಾಡಿಸಬೇಕು.

ವಿರಾ—ಮಹಾನುಭಾವರಿಗೆ ನಮಸ್ಕರಿಸುವೆವು. (ವಿರಾ, ವೇಬರ್ ನಮಸ್ಕರಿಸುವರು).

ಯೋಗಾ—ಯಾರೊ ಅದು ?

ಭಾರ್ಗವ—ಒಬ್ಬ ಸ್ತ್ರೀಯೂ, ಒಬ್ಬ ಬಾಲಕನೂ ತಮಗೆ ನಮಸ್ಕರಿಸುತ್ತಲಿರುವರು.

ಯೋಗಾ—ಬಾಲಕನು ಬೇಕಾದರೆ ಇಲ್ಲಿದ್ದು ನಮ್ಮಲ್ಲಿ ಕೇಳಬೇಕಾದ್ದೇನಾದರೂ ಕೇಳಲಿ. ಇನ್ನೊಬ್ಬ ವ್ಯಕ್ತಿಯು ಇಲ್ಲಿರಕೂಡದು. ಹೊರಟು ಹೋಗೆಂದು ಹೇಳು. ಬ್ರಹ್ಮಚಾರಿಯಾದ ನನ್ನಲ್ಲಿ ಅವರಿಗೇನುಕೆಲಸ ?

ಮುನಿಕುಮಾರ —ನಾನೇನು ಮಾಡಲಿ. ಆಗಲೇ ಹೇಳಿದೆ. ನನ್ನ ಮಾತನ್ನು ಅವರು ಲಕ್ಷಿಸುವುದೇ ಇಲ್ಲ.

ಮೀರಾ—ಪೂಜ್ಯರೆ, ಸ್ವಲ್ಪ ಸಾವಧಾನದಿಂದ ನನ್ನ ಮಾತನ್ನು ಲಾಲಿಸಬೇಕು. “ ವಾಸುದೇವಃ ಪುಮಾನೇಕಃ ಸ್ತ್ರೀಮಯಂ ತ್ವಿತರಂ ಜಗತ್ ||” ಪ್ರಪಂಚದಲ್ಲಿ ವಾಸುದೇವನೊಬ್ಬನೇ ಪುರುಷನು, ಮಿಕ್ಕವರೆಲ್ಲರೂ ಸ್ತ್ರೀಯರು ಎಂದು ಉಪನಿಷದ್ವಚನವಿಲ್ಲವೇ? ತಮ್ಮಂತಹ ಪ್ರಾಜ್ಞರಾದವರಿಗೆ ನಾನು ಹೇಳಬೇಕಾದುದು ಅವಶ್ಯಕವೆ? ಆದ್ದರಿಂದ ಪೂಜ್ಯರಲ್ಲಿ ನನ್ನ ಚರಿತ್ರೆಯನ್ನು ಹೇಳಿಕೊಂಡು ಅಪ್ಪಣೆಯಾದಂತೆ ನಡೆದುಕೊಳ್ಳಬೇಕೆಂದಿರುವೆನು.

ಯೋಗ—ನಿನ್ನ ಕಥೆಯನ್ನು ಬಲ್ಲೆನು. ನಿನಗೆ ಕ್ಷಿಪ್ರದಲ್ಲಿಯೇ ಸರ್ವಕ್ಷೇಮವೂ ಉಂಟಾಗುವದು. ಪರಮವೈರಾಗ್ಯವನ್ನು ನಿನಗೆ ಸಾಂಗವಾಗಿ ತಿಳಿಸಬೇಕೆಂದು ಗೋವರ್ಧನಧಾರಿಯು ಆಜ್ಞೆಯ ಮೇರೆ ಗಂಗೋತ್ತರೆಯಿಂದ ಇಲ್ಲಿಗೆ ಬಂದೆನು. ನಿನ್ನ ಪರೀಕ್ಷಾರ್ಥವಾಗಿ ಹಾಗೆ ಮಾಡಿದೆನೆ ಹೊರತು ಅನ್ಯಥಾ ತಿಳಿಯಬೇಡ. ಕುಮಾರಿ, ನಿನಗೆ ಪರಮವೈರಾಗ್ಯ ಮಾರ್ಗವನ್ನು ಬೋಧಿಸುವೆನು, ನನ್ನೊಡನೆ ಬಾ.

ಮೀರಾ—ಅಪ್ಪಣೆಯಾದಂತೆ. (ಹೋಗುವರು).

ತೆರೆಯು ಬೀಳುವುದು.

---

### ೪ ನೇ ರಂಗ.

(ಪಥದಲ್ಲಿ—ಚಂಪೆ ಚಮೇಲಿಯರು ಪ್ರವೇಶಿಸುವರು).

**ಚಮೇಲಿ**—ಚಂಪಾ, ಸ್ವಲ್ಪಹೊತ್ತು ಇಲ್ಲಿ ನಿಂತುಕೊಳ್ಳೋಣ. ಯಶೋಧರಪಂಡಿತನೂ ಬರಲಿ.

**ಚಂಪೆ**—ಆಗಬಹುದು. (ನಿಲ್ಲುವರು).

**ಚಮೇಲಿ**—ಸಖಿ, ಯಶೋಧರಪಂಡಿತನಿಲ್ಲದಿದ್ದರೆ ನಿನ್ನನ್ನು ನೋಡುವುದಕ್ಕೆ ಆಗುತ್ತಿರಲಿಲ್ಲ.

**ಚಂಪೆ**—ಅದು ಹೇಗೆ ?

**ಚಮೇಲಿ**—ಮಹಾರಾಣಿಯವರು ಅರಮನೆಯನ್ನು ಬಿಟ್ಟು ಹೋದಮೇಲೆ ನಾನು ಬೃಂದಾವನಕ್ಕೆ ಹೋಗಬೇಕೆಂದು ನಿಶ್ಚಯಿಸಿದೆನು. ಆದರೆ ಯಶೋಧರನು ತನ್ನ ಗೃಹಕೃತ್ಯದ ವಿಷಯವನ್ನು ಸುವ್ಯವಸ್ಥೆಗೊಳಿಸಿಬಿಟ್ಟು ತಾನೂ ನನ್ನೊಡನೆ ಬರಬೇಕೆಂದು ಹಟಮಾಡಿ ನನ್ನನ್ನು ತಡೆದು ನಿಲ್ಲಿಸಿಬಿಟ್ಟನು.

**ಚಂಪೆ**—ನಿನ್ನಮೇಲೆ ಯಶೋಧರನಿಗೆ ಎಷ್ಟು ವಿಶ್ವಾಸವಿರಬೇಕು. ಇಲ್ಲದಿದ್ದರೆ ಅಸಾಧ್ಯ ವಿದ್ವಾಂಸನಾದ ಅವನು ತರ್ಕದಲ್ಲಿ ನಿನಗೆ ಸೋಲುತ್ತಲಿದ್ದನೆ ?

**ಚಮೇಲಿ**—ಯಶೋಧರನ ಗೃಹಕೃತ್ಯದ ವಿಷಯಗಳು ಸುವ್ಯವಸ್ಥೆಯಾಗುವುದಕ್ಕೆ ಕಾಲವಿಳಂಬವಾಯಿತು. ಅಷ್ಟರಲ್ಲಿ ನೀನು ಬಂದೆ.

**ಚಂಪೆ**—ವಾಸ್ತವ. ಮಹಾರಾಣಿಯವರನ್ನು ಎಲ್ಲೆಲ್ಲೂ ಹುಡುಕಿ ಹುಡುಕಿ ಸಾಕಾಗಿ, ಅವರಿಗಾದ ಗತಿಯನ್ನು ತಿಳಿದುಕೊಳ್ಳಲಾರದೆ ನಿನ್ನನ್ನಾದರೂ ನೋಡೋಣವೆಂದು ಬಂದೆನು.

(ಯಶೋಧರನು ತಲೆಯ ಮೇಲೆ ಒಂದು ಮೂಟೆಯನ್ನು ಹೊತ್ತುಕೊಂಡು ಪ್ರವೇಶಿಸುವನು).

**ಚಮೇಲಿ**—ಪಂಡಿತರೇ, ಎಷ್ಟು ಸಲ ನಾನು ಕೇಳಿಕೊಂಡರೂ ನೀವು ಮನಸ್ಸು ಮಾಡಲಿಲ್ಲ. ಆ ಗಂಟಿನಲ್ಲಿ ಏನಿರುವುದು ಒಂದು ಸಲ ತೋರಿಸಬಾರದೆ ?

ಚಂಪೆ—ನನಗೂ ಕುತೂಹಲವಾಗಿದೆ. ತೋರಿಸಿ ; ಚಮೇಲಿಗಲ್ಲದೆ ಮತ್ತಾರಿಗೆ ನೀವು ಗಂಟು ಹೊತ್ತಾಕಬೇಕು.

ಪಂಡಿತ—(ಸ್ವಲ್ಪ ನಾಚಿಕೆಯಿಂದ) ಇನ್ನೇನು ಇಲ್ಲ. ಮನೆಯಲ್ಲಿ ನಮ್ಮ ತಾಯಿಯ ಉಪಯೋಗಕ್ಕೆ ನಾಲ್ಕಾರು ಕುಡಕೆ ಮಡಕೆಗಳು, ಎರಡು ಮೂರು ಬಟ್ಟೆಬರೆಗಳು, ಒಂದೆರಡು ಹಣಕಾಸು ಇರಿಸಿ ಬಿಟ್ಟು, ಕೆಲವು ಪದಾರ್ಥಗಳನ್ನು ಗಂಟು ಕಟ್ಟಿಕೊಂಡು ಬಂದೆನು. ಒಂದು ವೇಳೆ ಬೃಂದಾವನದಲ್ಲೇ ಉಳಿದರೆ ಯಾರಿಗಾದರೂ ಉಪಯೋಗಕ್ಕೆ ಬರಲೆಂದು ತಂದೆನು. (ಗಂಟು ಬಿಚ್ಚಿತೋರಿಸುವನು).

ಚಮೇಲಿ—ಬರೀ ಬಟ್ಟೆಗಳೇ ಇವೆಯಲ್ಲ ? ನಿಮ್ಮ ಪುಸ್ತಕಗಳೆಲ್ಲಿ ?

ಪಂಡಿತ—ಇನ್ನು ಪುಸ್ತಕಗಳಿಂದ ನನಗೇನೂ ಪ್ರಯೋಜನವಿಲ್ಲವೆಂದು ಮನೆಯಲ್ಲೇ ಬಿಟ್ಟುಬಂದೆನು.

ಚಂಪೆ—ಅಯ್ಯೋ ಅಯ್ಯೋ, ಮುಗುಟವೆಂದಿದ್ದೆನಲ್ಲ. ಪಂಡಿತರೇ, ಇದೇನು ಶೀರೆ ಕುಪ್ಪಸಗಳನ್ನು ಹೊತ್ತುಕೊಂಡು ಬಂದಿದ್ದೀರಿ.

ಪಂಡಿತ—(ನಾಚಿಕೆ).

ಚಂಪೆ—ಚಮೇಲಿ, ನೋಡಿದೆಯಾ ? ನಿನ್ನ ಪುಣ್ಯಕ್ಕೆ ಕೊನೆಯೇ ಇಲ್ಲ.

ಚಮೇಲಿ—ಅದೇನೋ ಪುಸ್ತಕದಹಾಗೆ ಕಾಣಿಸುವುದು. ಹೋಗಲಿ ಅದೊಂದು ಪುಸ್ತಕವನ್ನಾದರೂ ತಂದಿದ್ದೀರಲ್ಲ. (ತೆಗೆದುಕೊಳ್ಳುವಳು).

ಪಂಡಿತ—ಅದೇ ಮಣಿದರ್ಪಣವೆಂಬ ಪುಸ್ತಕ. ನಿನಗೇತಕ್ಕೆ ಇಲ್ಲಿತಾ ?

ಚಮೇಲಿ—ಬಹಳದಿವಸಗಳಿಂದಲೂ ಮಣಿದರ್ಪಣವನ್ನು ನೋಡಬೇಕೆಂದಿದ್ದೆನು. ಸ್ವಲ್ಪತಾಳಿ ನೋಡಿಕೊಡುವೆನು. (ಪುಸ್ತಕವನ್ನು ತೆರೆಯುವಳು. ಪುಸ್ತಕದಹಾಗಿರುವ ಆ ಪೆಟ್ಟಿಗೆಯಲ್ಲಿ ಒಡವೆವಸ್ತುಗಳಿರುವವು) ಪಂಡಿತರೆ ?

ಪಂಡಿತ—ಬೃಂದಾವನದಲ್ಲಿ ಹಬ್ಬಹಾಡಿಗಳೇನಾದರೂ ಬಂದರೆ ಉಪಯೋಗಿಸುವುದಕ್ಕಿರಲೆಂದು ತಂದೆನು.

ಚಂಪೆ—ಪಂಡಿತರೇ, ಹೊತ್ತಾಗುವುದು ನಡೆಯಿರಿ ಹೋಗೋಣ. ಯುಕ್ತಾಯುಕ್ತವನ್ನು ಅರಿತು ಇವುಗಳನ್ನು ತಂದಿರುವಿರಲ್ಲಾ, ನಿಮ್ಮ ಜಾಣ್ಮೆಯನ್ನು ಎಷ್ಟು ಹೇಳಿದರೂ ತೀರದು. (ಪರೋಕ್ಷ) ಸಖಿ, ನೀನು ಬಹು ಪುಣ್ಯಶಾಲಿ. ಎಲ್ಲರನ್ನೂ ಗೆಲ್ಲಲು ಸಮರ್ಥನಾದ ಈ ಯಶೋಧರಪಂಡಿತನು ನಿನಗೆ ತೀರಾ ಸೋತುಹೋಗಿರುವನು. (ಹೋಗುವರು).

ತೆರೆಯು ಏಳುವುದು.

---

## ೪ ನೇ ರಂಗ.

(ಅರಣ್ಯಪ್ರಾಂತರ—ಒಂದು ಸಣ್ಣ ಗೋವರ್ಧನಧಾರಿಯ ಗುಡಿಯು ಕಾಣಿಸುವದು. ವಿಮಾ, ಭಾರ್ಗವರು ದೇವರಿಗೆ ನಮಸ್ಕಾರ ಮಾಡುತ್ತಿರುವರು).

ವಿಮಾ— ರಾಗ—ಬಾಗೇಶ್ರೀ. ತಾಳ—ರೂಪಕ.

(ಪ) ಪಾಹಿ ಮುಕುಂದಗಿರಿಧಾರೆ ಏಹಿ ಕೃಪಾಂಕುರ ಮುರಾರೆ ।
ದೇಹಿ ತವದಾಸ್ಯಂ ಮಧುಕೈಟಭಾರೆ ॥

(ಅ) ವೇಣುವಾದನಶೋಲ ಕರುಣಾಲವಾಲ ಪೀತಾಂಬರಚೇಲ
ದೀನಜನಪಾಲ ॥

(ಪುನಃ ನಮಸ್ಕಾರ ಮಾಡಿ) ಭಾರ್ಗವ, ಬಹಳದೂರ ನನ್ನೊಡನೆ ಬಂದಿರುವೆ. ಗುರುಗಳ ಆಶ್ರಮಕ್ಕೆ ಹಿಂತಿರಿಗಿ ಹೋಗು. ನಾನೊಬ್ಬಳೇ ಬೃಂದಾವನದ ದಾರಿಯನ್ನು ಹಿಡಿಯುವೆನು.

ಭಾರ್ಗವ—ತಾಯೇ, ಭಯಂಕರವಾದ ಈ ಮಹದರಣ್ಯದಲ್ಲಿ ತಮ್ಮನ್ನು ಏಕಾಂಗಿಯಾಗಿ ಬಿಟ್ಟು ಹೋಗಬಹುದೆ? ಕ್ರೂರಜಂತುಗಳಿಂದಲೂ, ಕ್ರೂರತರರಾದ ದಸ್ಯುವಾದಿ ದುಷ್ಟಜನರಿಂದಲೂ ನಿಬಿಡ

ವಾದ ಈ ಕಗ್ಗಾಡಿನಲ್ಲಿ ತಮ್ಮೊಬ್ಬರನ್ನೇ ಬಿಡಬಲ್ಲೆನೆ. ಹಾಗೆ ಬಿಟ್ಟಲ್ಲಿ ಗುರುಗಳು ಒಪ್ಪುವರೆ? ತಾಯೆ, ಕ್ಷಮಿಸಬೇಕು.

ಮೀರಾ—ಇಂತಹ ಕಾಡಿನಲ್ಲಿಯೂ ನನಗೆ ದರ್ಶನವನ್ನೀಯುವ ಸರ್ವ ದುಃಖನಾಶಕನೂ, ಕರುಣಾಕರನೂ ಆಗಿರುವ ಈ ಕೃಷ್ಣಪರ ಮಾತ್ಮನಿರುವಲ್ಲಿ ನನ್ನನ್ನು ಯಾರೇನು ಮಾಡಬಲ್ಲರು. ಭಾರ್ಗವ, ಆದುದರಿಂದ ನೀನು ನನ್ನ ವಿಷಯದಲ್ಲಿ ನಿರ್ಭೀತಿಯಿಂದಿರು. ಗುರುಗಳಿಗೆ ನನ್ನ ಪ್ರಣಾಮಗಳನ್ನು ಸಮರ್ಪಿಸಿ, ನನ್ನ ಕೋರಿಕೆಯ ಮೇರೆಯೇ ಬಿಟ್ಟು ಬಂದೆನೆಂದು ಹೇಳು ಹೋಗು?

ಭಾರ್ಗವ—ತಾಯೆ, ತಮ್ಮನ್ನು ಬಿಟ್ಟು ಹೋಗುವುದಕ್ಕೆ ನಿಶ್ಚಯವಾಗಿಯೂ ನನಗೆ ಮನಸ್ಸಿಲ್ಲವಾದರೂ ತಮ್ಮ ಅಪ್ಪಣೆಯನ್ನು ಮೀರಲಾರೆನು. ಇದೋ ಹೋಗುವೆನು. (ನಮಸ್ಕರಿಸಲು, ಆಶೀರ್ವದಿಸಲ್ಪಟ್ಟು ಹೋಗುವನು. ಮೀರಾಬಾಯಿಯು ಗೋವರ್ಧನಧಾರಿಗೆ ನಮಸ್ಕರಿಸುತ್ತಿರುವಳು).

(ಆನಂದರಾಯನೆಂಬ ದಸ್ಯುವು ಪ್ರವೇಶಿಸುವನು).

ಆನಂದ—ಕೊನೆಗೆ ಆ ಹುಡುಗ ತೊಲಗಿಹೋದ. ಮನುಷ್ಯನ ನಡೆ, ನುಡಿ, ಮೊದಲಾದ ಸರ್ವಗುಣಗಳೂ ಹೆಸರಿಗೆ ತಕ್ಕಹಾಗಿದ್ದರೆ ಲೋಕದಲ್ಲಿ ಹುಟ್ಟಿದ್ದಕ್ಕೆ ಲಕ್ಷಣ, ಇಲ್ಲದಿದ್ದರೆ ಏನು ಪ್ರಯೋಜನ? ನನ್ನ ಹೆಸರು ಆನಂದ. ನನ್ನ ಸರ್ವಗುಣಗಳೂ ನಿರಂತರ ಆನಂದ. ಇಂಥಾ ಆನಂದರಾಯನಾದ ನಾನು ಈಕೆಯ ರೂಪ ಲಾವಣ್ಯಗಳನ್ನು ನೋಡಿ ಪರವಶನಾಗಿ, ನನ್ನಾನಂದಕ್ಕೆ ಇವಳನ್ನು ಭಾಗಿಯನ್ನಾಗಿ ಮಾಡಿಕೊಳ್ಳಬೇಕೆಂದು ನೆನ್ನೆ ಮಧ್ಯಾಹ್ನದಿಂದಲೂ ಕಲ್ಲು ಮುಳ್ಳು ಎಂದು ಬಂದನ್ನೂ ನೋಡದೆ ಇವಳನ್ನು ಹಿಂಬಾಲಿಸಿ ಬಂದೆನು. ಹತ್ತಿರದಲ್ಲಿ ನಿಂತು ಬಂದೆರಡು ಮಾತನಾಡಿ ನೋಡೋಣವೆಂದರೆ ಆ ಪ್ರಾರಬ್ಧ ಹುಡುಗನೊಬ್ಬನು ಯಾವಾಗಲೂ ಸಮೀಪದಲ್ಲೇ ಇರುತ್ತಲಿದ್ದ. ಸದ್ಯಕ್ಕೆ ತೊಲಗಿ

ಹೋದೆ. ಇವಳನ್ನು ಮಾತನಾಡಿಸಿ ತಿಳಿದುಕೊಳ್ಳುವೆನು (ಮೀರಾ ಬಾಯಿಯ ಹತ್ತಿರಕ್ಕೆ ಹೋಗಿ) ಅಮ್ಮ, ನಿನ್ನನ್ನೊಂದೆರಡು ಮಾತು ಕೇಳಬೇಕೆಂದಿರುವೆನು. ಕೋಪಮಾಡದೆ ದಯವಿಟ್ಟು ಹೇಳಬೇಕು. ಇಷ್ಟು ರೂಪವತಿಯಾದ ನೀನು ಈ ಕಾಡಿನಲ್ಲಿ ಒಬ್ಬಳೇ ಇರುವೆಯಲ್ಲ. ದುಷ್ಟಮೃಗಗಳ ಮತ್ತು ದುಷ್ಟಮನುಷ್ಯರ ಹೆದರಿಕೆಯೇ ಇಲ್ಲವೆ? ಹಾದೀಲಿ ಹೋಗುವವನು ಎಂದು ನನ್ನಲ್ಲಿ ಉಪೇಕ್ಷೆ ಮಾಡದೆ ಹೇಳು?

ಮೀರಾ—ದೈವಭಕ್ತರಿಗೆ ಯಾರಿಂದಲೂ ಭಯವಿಲ್ಲವು.

ಆನಂದ—ನಿನ್ನನ್ನು ನೋಡಿದರೆ ಸುಮಂಗಲಿಯಹಾಗೆ ಕಾಣಿಸುತ್ತಿ ದ್ದೀಯೇ? ಇಷ್ಟು ರೂಪವತಿಯಾದ ನೀನು ಪತಿಯಿಲ್ಲದೆ ಕಾಡಿನಲ್ಲಿ ಒಂಟಿಯಾಗಿ ತಿರುಗುವದಕ್ಕೆ ಏನು ಕಾರಣ? ಅಧಿಕಪ್ರಸಂಗಿಯೆಂದು ನನ್ನಲ್ಲಿ ವಿರಕ್ತಿ ಮಾಡದೆ ಹೇಳು?

ಮೀರಾ—ಅಯ್ಯಾ, ನಿನ್ನ ದಾರಿಯನ್ನು ಹಿಡಿದುಕೊಂಡು ಹೋಗು?

ಆನಂದ—ನೋಡಿದೆಯಾ? ನಾನು ಕೋಪಮಾಡಬೇಡವೆಂದು ಕೇಳಿಕೊಂಡಿದ್ದಾಗ್ಯೂ ನೀನು ಕೋಪಮಾಡುತ್ತಿರುವೆ? ಇಷ್ಟು ರೂಪವತಿಯಾದ ನೀನು ಈ ಕಗ್ಗಾಡಿನಲ್ಲಿ ಒಬ್ಬಳೇ ಕಷ್ಟಪಡುತ್ತಿರುವೆಯಲ್ಲ ಎಂದು ಮನನೊಂದು ನಿನ್ನಲ್ಲಿ ಸಂಪೂರ್ಣವಾದ ವಿಶ್ವಾಸವನ್ನಿಟ್ಟು ನಾನು ಕೇಳುತ್ತಿರುವಲ್ಲಿ ನೀನು ಹೀಗೆ ಸುಮ್ಮನೆ ಕೋಪಮಾಡಬಹುದೆ? ನೀನು ಯಾರು?

ಮೀರಾ—ಕೃಷ್ಣಪರಮಾತ್ಮನ ದಯೆಯಿರುವವರಿಗೂ ನನಗೆ ಯಾವದೂ ಕಷ್ಟವಾಗಿ ತೋರದು. ನಾನು ಆತನ ದಾಸಿಯು.

ಆನಂದ—ದಾಸಿಯೋ? (ಹತ್ತಿರಕ್ಕೆ ಹೋಗುವನು).

ಮೀರಾ—(ಹಿಂದಕ್ಕೆ ಸರಿದು) ಧೂರ್ತ, ಇದೇನು ನೀನು ಮಾಡುವುದು. ದೂರ ಹೋಗು?

ಆನಂದ—ಏಕೆ?

ವಿಾರಾ—ಕಂ|| ಪರಿಣಾಮಪೇಕಲಮುಮ |

ಸ್ಥಿರಮುಮೆನಿಸಿದೀ ಶರೀರಕೆ ವಿಷಯವಿಷಮ ||

ನ್ನೆರೆದು ವಧಿಸದೆ ನಿರಾಮಯ |

ವರಕೃಷ್ಣರಸಾಯನಂ ಕುಡಿದುನೀಂ ಸುಖಿಸೈ ||

ಅಯ್ಯಾ ಮೂರ್ಖನೆ, ದುರ್ವ್ಯಸನಗಳಿಗೆ ಬಳಗಾಗದೆ ಮೋಕ್ಷಸಾಧಕ ಜ್ಞಾನಮಾರ್ಗವನ್ನು ಹಿಡಿದು ಸುಖಿಯಾಗು, ಹೋಗು ?

ಆನಂದ—ಚನ್ನಾಗಿ ಹೇಳಿದೆ. ನನ್ನ ಚಿತ್ತವೃತ್ತಿಯು ನೀನು ಹೇಳಿದ ಹಾಗೆಯೇ ಇರುವುದು. ನನ್ನಲ್ಲಿ ದುರ್ವ್ಯಸನವೆನ್ನುವುದೇ ಇಲ್ಲ. ಸರ್ವದಾ ಆನಂದವಾಗಿರುವ ಆನಂದರಾಯನೆಂತಲೆ ನನ್ನ ಹೆಸರು. ಇದೋ ನನ್ನ ಕಕ್ಷದಲ್ಲಿರುವ ಗಂಟಿನಲ್ಲಿ ಜ್ಞಾನಮಾರ್ಗವಾದ ಪಾನವಿದೆ. ನನ್ನೆದುರಿಗೆ ಮೋಕ್ಷವೆನ್ನುವ ರೂಪವತಿಯಾದ ನೀನೇ ನಿಂತಿದ್ದೀಯೆ. ನಿನ್ನನ್ನು ಸಾಧಿಸಿಕೊಳ್ಳುವುದೊಂದೇ ಉಳಿದಿರುವುದು. (ಹತ್ತರ ಹೋಗಲೆತ್ನಿಸುವನು).

ವಿಾರಾ—ಪರಸ್ತ್ರೀಯರ ಗೊಡವೆಗೆ ಹೋದವರ ಗತಿ ಏನಾಯಿತೆಂಬುದು ಪುರಾಣಪ್ರಸಿದ್ಧವಾಗಿಲ್ಲವೆ ? ಹೊರಟುಹೋಗು ?

ಆನಂದ—ಅಯ್ಯೋ ಮರುಳೇ, ನಿನ್ನ ಗೊಡ್ಡು ಪುರಾಣಗಳ ಸುಳ್ಳುಕಥೆಗಳಿಂದ ನನಗೆ ಮಂಕುಬೂದಿಯನ್ನೆರಚಿ ತಪ್ಪಿಸಿಕೊಳ್ಳಬೇಕೆಂದಿರುವೆಯಾ ? ಇಷ್ಟು ರೂಪವತಿಯಾದ ಒಬ್ಬದಿವ್ಯ ಹೆಂಗಸು ನನ್ನೆದುರಿಗೆ ಸಾಕ್ಷಾತ್ ರತೀದೇವಿಯ ಹಾಗೆ ನಿಂತಿರುವಲ್ಲಿ ನಾನೇ ಸುಮ್ಮನೆ ಬಿಟ್ಟು ಹೋಗುವಂತಹ ಆನಂದರಾಯ. ಸುಮ್ಮನೆ ನಿನ್ನ ಬಿಂಕವನ್ನು ಬಿಟ್ಟು ನನ್ನೊಡನೆ ಬಾ. (ಸಮಿಾಪಕ್ಕೆ ಹೋಗಲೆತ್ನಿಸುವನು).

ವಿಾರಾ—ನಿನಗೆಷ್ಟು ಹೇಳಿದರೂ ಪ್ರಯೋಜನವಿಲ್ಲ. ನೀನು ಮೂರ್ಖನು, ಕ್ರೂರಾತ್ಮಯು.

ಆನಂದ—ಸಾಕು, ಸಾಕು. ನಾನು ಯಾರೆಂದು ತಿಳಿದಿರುವೆ ? ಢಾಕಾದಲ್ಲಿ ನಾನೊಬ್ಬ ಶ್ರೀಮಂತನಾಗಿದ್ದೆನು. ನನ್ನ ಸರ್ವಸ್ವವನ್ನೂ ಮಧು

ಮತ್ತು ಮಧುರಾಂಗಿಯರಲ್ಲಿ ಸದ್ವಿನಿಯೋಗ ಮಾಡುವುದರಲ್ಲಿ ನಿರತನಾಗಿದ್ದೆನು. ಕೊನೆಗೆ ಅಕೃತ್ಯವನ್ನು ಮಾಡಿದೆನೆಂದು ಪುರದಿಂದ ಹೊರಡಿಸಲ್ಪಡಲು ದಸ್ಯುವಾದೆನು. ಈ ದಸ್ಯುವಿಗೆ ಈ ದಾಸಿಯು ದೊರೆತದ್ದು ಅನುಕೂಲವಾಯಿತು. ಈ ಕಾಡಿನಲ್ಲಿ ಏಕಾಂಗಿಯಾಗಿರುವ ನನಗೆ ಹೆಂಡತಿಯಾಗುವೆ ಬಾ ? ಏನು ಮಾಡಿದರೂ ನಿನ್ನನ್ನು ನಾನು ಬಿಡೆನು. (ಹಿಡಿದುಕೊಳ್ಳುವುದಕ್ಕೆ ಹೋಗುವನು. ಮೀರಾವು ಗುಡಿಯೊಳಗೆ ಓಡಿ ಹೋಗುವಳು. ಆನಂದನೂ ಗುಡಿಯೊಳಗೆ ಪ್ರವೇಶಿಸುವನು. ಕೃಷ್ಣ ಪರಮಾತ್ಮನ ಪಾದಗಳಿಂದ ಒಂದು ಘಟಸರ್ಪವು ಹೊರಟು ಬಂದು ಆನಂದನನ್ನು ಕಡಿಯಲು ಮೃತನಾಗುವನು).

ತೆರೆಯು ಬೀಳುವುದು.

---

## ೪ನೇ ರಂಗ.

(ಮೇವಾಡದ ಸಮೀಪಸ್ಥವಾದ ಆರಾವಳಿ ಪರ್ವತಪ್ರಾಂತ್ಯದ ಮೈದಾನದಲ್ಲಿ ಕುಂಭನು ಖಡ್ಗಪಾಣಿಯಾಗಿ ಮುಖವಾಡಾದಿ ಯುದ್ಧದ ಪೋಷಾಕನ್ನು ಧರಿಸಿಕೊಂಡು ಪ್ರವೇಶಿಸುವನು).

ಕುಂಭ—ವೀರನಾದ ರಣಛೋಡನು ಅಳಿದನು. ಧೀರನೂ ಮಂತ್ರಾಲೋಚನಾದಕ್ಷನೂ ಆದ ಹಂಮೀರನು ವೀರಸ್ವರ್ಗವನ್ನು ಸೇರಿದನು. ಶೂರನೂ ಶಸ್ತ್ರಾಸ್ತ್ರಪ್ರಯೋಗ ನಿಪುಣನೂ ಆದ ಸೇನನು ಶತ್ರುಗಳಾದ ಯವನರಲ್ಲನೇಕರನ್ನು ಕಡಿದು ತಾನೂ ಮೃತಿಯನ್ನೈದಿದನು. ಇನ್ನು ನಾನೊಬ್ಬನು ಮಾತ್ರ ಉಳಿದಿರುವೆನು. ನನ್ನೊಡನೆ ಹೋರಾಡುತ್ತಲಿದ್ದ ಆ ಯವನಯೋಧನು ಸಮರ್ಥನೂ, ಯುದ್ಧಕಲಾಕೌಶಲದಲ್ಲಿ ನಿಪುಣನೂ, ಶಸ್ತ್ರಾಸ್ತ್ರಪ್ರಯೋಗದಲ್ಲಿ ದಕ್ಷನೂ ಆಗಿರುವಂತೆ ತೋರುವುದು. ನಾನು ಏನು ಮಾಡಿದರೂ ನನ್ನ ಖಡ್ಗಹತಿಗೆ ಸಿಕ್ಕದೆ ಚಮತ್ಕಾರದಿಂದ ತಪ್ಪಿಸಿಕೊಳ್ಳುತ್ತಲಿ

ರುವನು. ಹೇಗಾದರೂ ಮಾಡಿ ಮೊದಲು ಆ ಯುವನವೀರನನ್ನು ಕೊಂದು, ಅನಂತರ ನನ್ನ ಕುಲಶತ್ರುವಾದ ಆ ಅಕ್ಬರನನ್ನು ನಿರ್ನಾಮಣ ಮಾಡುವೆನು. ಆಗದಿದ್ದರೆ ಇಲ್ಲೇ ಸಂಹೃತನಾಗು ವೆನು. (ತೆರೆಕಡೆ ನೋಡಿ) ಯುವನ ವೀರನು ಇತ್ತಲೇ ಬರುತ್ತಿ ರುವನು. (ಮುಖಕ್ಕೆ ಮುಖವಾಡಾದಿ ಯುದ್ಧದ ಪೋಷಾಕನ್ನು ಹಾಕಿಕೊಂಡು ಕರವಾಳಹಸ್ತನಾಗಿ ಅಕ್ಬರನು ಪ್ರವೇಶಿಸು ವನು).

ಅಕ್—ಭಾಪು ರಜಪೂತ ವೀರನೆ, ನಿನ್ನ ಬಾಹುಗಳ ಪ್ರತಾಪಕ್ಕೆ ಪ್ರತಿ ಯನ್ನು ನಾನೆಲ್ಲೂ ಕಾಣೆನು. ಬಾ, ಮತ್ತೊಂದು ಸಲ ದ್ವಂದ್ವ ಯುದ್ಧದಲ್ಲಿ ನಿನ್ನ ಕರಲಾಘವವನ್ನು ಪರೀಕ್ಷೆ ಮಾಡುವೆನು. (ಇಬ್ಬರೂ ಹೊಡೆದಾಡುವರು. ಕುಂಭನು ಪೆಟ್ಟುತಿಂದು ಭೂಮಿ ಯಮೇಲೆ ಬಿಳುವನು. ಖಡ್ಗವು ಕೆಳಗೆ ಬೀಳುವುದು).

ಕುಂಭ—ವಿಾರಾ! ವಿಾರಾ! ನಿನ್ನ ವಿಜ್ಞಾಪನೆಯನ್ನು ಲಾಲಿಸದೆ ಕ್ರೂರ ದಂಡನೆಯನ್ನು ವಿಧಿಸಿ ಪಾತಕಿಯಾದೆನು. ವಿಾರಾ! (ಜ್ಞಾನಶೂ ನ್ಯನಾಗುವನು).

ಅಕ್—ಇವನೇ ಮಹಾವೀರನಾದ ಕುಂಭರಾಣನು. ತೀವ್ರದುಃಖದಿಂದ ರಣೋತ್ಸಾಹರಹಿತನಾಗಿರುವುದ್ದರಿಂದಲೆ ನನ್ನಿಂದ ಪರಾಜಿತನಾ ದನು. ಇಲ್ಲದಿದ್ದರೆ ಈತನ ಖಡ್ಗಹತಿಯಿಂದ ನಾನು ಉಳಿಯುತ್ತಿ ರಲಿಲ್ಲ. (ಕುಂಭನಿಗೆ ಗಾಳಿ ಬೀಸುವನು).

ಕುಂಭ—(ಎಚ್ಚೆತ್ತು) ಅಯ್ಯಾ ಯುವನವೀರನೆ, ಸಂಗ್ರಾಮದ ನ್ಯಾಯರೀ ತ್ಯಾ ನಾನು ನಿನ್ನಿಂದ ಪರಾಜಿತನಾಗಿರುವದ್ದರಿಂದ ವಧ್ಯಾರ್ಹನು. ನನ್ನ ಪ್ರಾಣವನ್ನು ತೆಗೆದುಬಿಡು. ನೀನು ನನಗೆ ದಯವನ್ನು ತೋರಿಸಿ ನಿರ್ದಯನಾಗಬೇಡ.

ಅಕ್—ವೀರ ರಜಪೂತನೆ, ವಿಶಸ್ತ್ರೀಯಾದವನನ್ನೂ ಭೂಶಾಯಿಯಾದವ ನನ್ನೂ ಕೊಲ್ಲುವುದು ಪೌರುಷಕ್ಕೆ ವಿರುದ್ಧವಾದುದರಿಂದ, ನೀನು

ಪುನಃ ಶಸ್ತ್ರವನ್ನು ಧರಿಸಿ ನನ್ನೊಡನೆ ಯುದ್ಧಮಾಡು ; ಅದೃಷ್ಟವಿದ್ದಂತಾಗಲಿ.

ಕುಂಭ—ನನಗೆ ನಿನ್ನೊಡನೆ ಪುನಃ ಯುದ್ಧಮಾಡಲು ಸಾಹಸವಿಲ್ಲ. ಸಹಸ್ರಾರು ಯುದ್ಧಗಳಲ್ಲಿ ಎಷ್ಟು ಹೋರಾಡಿದರೂ ಶಕ್ತಿಗುಂದದ ಈ ಬಾಹುಗಳು ಯಾವ ಕಾರಣದಿಂದಲೋ ನಿರ್ವೀರ್ಯವಾಗಿವೆ.

ಅಕ್—ಮನಸ್ಸೇ ಕಾರಣವು.

ಕುಂಭ—ಹಾ !

ಅಕ್—ಅಯ್ಯಾ, ಎಲ್ಲಕ್ಕೂ ಮನಸ್ಸೇ ಕಾರಣವು. ಮನಸ್ಸು ನಿರ್ಜೀವವನ್ನು ಸಜೀವವನ್ನಾಗಿಯೂ, ಸಜೀವವನ್ನು ನಿರ್ಜೀವವನ್ನಾಗಿಯೂ ಮಾಡುವುದು. ಇದು ನಿಮ್ಮ ರಾಣಾವಿಗೆ ತಿಳಿಯುವುದು, ಆತನನ್ನು ಕೇಳು ?

ಕುಂಭ—ನಮ್ಮ ರಾಣಾವಿನ ಮನೋವ್ಯಥೆಗೆ ನಿಮ್ಮ ಬಾದಷಾವೇ ಕಾರಣನೆಂದು ನಾನು ತಿಳಿದಿರುವೆನು.

ಅಕ್—ನಿಮ್ಮ ರಾಣಾವಿನ ಮನೋವ್ಯಥೆಗೆ ನಿಮ್ಮ ರಾಣಾವೇ ಕಾರಣನೆಂದು ನಾನು ತಿಳಿದಿರುವೆನು.

ಕುಂಭ—ಅದು ಹೇಗೆ ?

ಅಕ್—ಒಬ್ಬ ಪತಿವ್ರತೆಯ ವಿಜ್ಞಾಪನೆಯನ್ನು ಲಾಲಿಸದೆ ಕ್ರೂರಶಿಕ್ಷೆಯನ್ನು ವಿಧಿಸಿದುದರಿಂದ.

ಕುಂಭ—ಪತಿವ್ರತೆಯೆನ್ನುವುದಕ್ಕೆ ಪ್ರಮಾಣವೇನು ?

ಅಕ್—ನಿಮ್ಮ ರಾಣಾವಿನ ಹೃದಯವು.

ಕುಂಭ—ಅದು ಸಾಲದು. ಅಕ್ಬರನೊಡನೆ ನಡೆದ ಸಂಭಾಷಣೆಯೂ, ರತ್ನಮಾಲಿಕೆಯ ಸಮರ್ಪಣೆಯೂ ಪ್ರತಿಬಂಧಿಸುವುವು.

ಅಕ್—ಅದಕ್ಕೇನೆ ವಿಜ್ಞಾಪನೆಯನ್ನು ಲಾಲಿಸದೆ ಕ್ರೂರಶಿಕ್ಷೆಯನ್ನು ವಿಧಿಸಿದುದು ಭ್ರಮವಾದವಾಯ್ತೆಂದೆನು,

ಕುಂಭ—ಆಗಲಿ, ವಿಜ್ಞಾಪನೆಯನ್ನು ಲಾಲಿಸಿದ್ದದ್ದೇ ಆದರೆ ಏನಾಗುತ್ತಲಿತ್ತು ?

ಅಕ್—ಒಬ್ಬ ಪತಿವ್ರತಾಶಿರೋಮಣಿಗೆ ಕ್ರೂರದಂಡನೆಯು ತಪ್ಪಿ, ಮೊಗಲ ಚಕ್ರಾಧಿಪತ್ಯಕ್ಕೆ ಆತಂಕವು ಪ್ರಾಪ್ತವಾಗುತ್ತಲಿತ್ತು. ರಾಣಾಜಿ, ನೀವು ಯಾರೆಂಬುದನ್ನು ನಿಮ್ಮ ಬಾಯಿಂದಲೇ ತಿಳಿದುಕೊಂಡೆನು. ಅದಿರಲಿ, ಮಹಾತಾಯಿಯಾದ ಮೀರಾಬಾಯಿಯವರ ಪಾದದರ್ಶನವನ್ನು ಮಾಡಬೇಕೆಂದು ಅಕ್ಬರನು ಬಹಳ ದಿವಸಗಳಿಂದಲೂ ಕುತೂಹಲವುಳ್ಳವನಾಗಿದ್ದನು. ಕಾಲವೊದಗಿದುದರಿಂದ ಒಬ್ಬ ಭಿಕಾರಿಯ ಸಹಾಯದಿಂದ ಮಹಾಮಾತೆಯ ದರ್ಶನವು ಲಭಿಸಿತು. ದಾನನಿಧಿಯಾದ ಆ ಮಾತಾಜಿಯು ಗೋವರ್ಧನಧಾರಿಗೆ ಸಮಯವೇಗವಶದಿಂದ ಅಕ್ಬರನು ರತ್ನಹಾರವನ್ನು ಕೊಟ್ಟನು. ಧ್ಯಾನದಲ್ಲಿ ಕಣ್ಣುಮುಚ್ಚಿಕೊಂಡಿದ್ದ ಆ ತಾಯಿಯು ತುಳಸೀ ಹಾರವೆಂದು ತೆಗೆದುಕೊಂಡರು. ಆಗ ರತ್ನಮಾಲಿಕೆಯೆಂದು ಅವರಿಗೆ ಗೊತ್ತಿರಲಿಲ್ಲ. ಮೀರಾಬಾಯಿಯವರನ್ನು ಅಕ್ಬರನು ತನ್ನ ತಾಯಿಯೆಂದು ತಿಳಿದಿರುವನೇ ಹೊರತು ಅನ್ಯಥಾವಿಲ್ಲ.

ಕುಂಭ—ನಿನ್ನ ಸ್ವಾಮಿಭಕ್ತಿಯು ನಿನ್ನನ್ನು ಹೀಗೆ ಹೇಳಿಸುವುದು. ಅಕ್ಬರನ ಪ್ರಕೃತಿಯೇ ಬೇರೆಯಾಗಿರಬೇಕು.

ಅಕ್—ಒಂದು ವೇಳೆ ಅಕ್ಬರನೇ ನಿಮ್ಮೊಡನೆ ಹೇಳಿದರೆ ನಂಬುವಿರೋ ?

ಕುಂಭ—ನಂಬುವೆನು.

ಅಕ್—ಇದೋ ನಾನೇ ಅಕ್ಬರನು.

(ಇಬ್ಬರೂ ಪರಸ್ಪರ ಕೈಹಿಡಿದುಕೊಳ್ಳುವರು).

ಅಕ್—ರಾಣಾಜಿ, ತಾವು ಆಯಾಸಪಟ್ಟಿರುವಿರಿ. ಸ್ವಲ್ಪ ವಿಶ್ರಮಿಸಿಕೊಳ್ಳುವಿರಂತೆ ನನ್ನೊಡನೆ ದಯಮಾಡಿ. (ಇಬ್ಬರೂ ಹೋಗುವರು).

ತೆರೆಯು ಏಳುವುದು.

೭ ನೇ ರಂಗ.

(ಕಾನನ. ವಿಶಾಲಾಕ್ಷಿ ವೃಕ್ಷಚ್ಛಾಯೆಯಲ್ಲಿ ಕುಳಿತಿರುವಳು).

**ವಿಶಾಲಾ**— ರಾಗ—ಮಾಲ್ಕೌಂಸ್. ತಾಳ—ಏಕ.

(ಪ) ಕರುಣಾಸಮುದ್ರಾ ನಮಸ್ತೆ ಗಿರಿಧಾರಿ ॥

(ಅ) ತುಂಬುರನಾರದವಿನುತಾ ಅಂಭೋರುಹಭವವಿನತಾ ।

ಜಂಭಾಸುರರಿಪುಸೇವಿತ ಸ್ತಂಬೇರಮವರವರದಾ ॥

(ಸಾಧುವೊಬ್ಬನು ಪ್ರವೇಶಿಸುವನು).

**ಸಾಧು**—ಯೋಗಾನಂದ ಮುನೀಶ್ವರರ ಆಶ್ರಮದಲ್ಲಿ ಈಕೆಯ ರೂಪ ಲಾವಣ್ಯಗಳನ್ನು ನೋಡಿ ಮೋಹಿತನಾದೆನು. ಆದರೆ ನನ್ನ ವ್ಯಾಮೋಹಪ್ರಕಾಶನೆಗೆ ಆ ಆಶ್ರಮವು ಸುಖಪ್ರದವೂ, ಸಮಯವೂ ಸೂಕ್ತವೂ ಅಲ್ಲವಾದುದರಿಂದ ಸುಮ್ಮನಿದ್ದೆನು. ಅನಂತರ ಅನ್ಯತ್ರ ಕಾರ್ಯವಿದ್ದುದರಿಂದ ಹೋಗಿ ಬರುವಷ್ಟರಲ್ಲಿ ಈಕೆಯು ಆಶ್ರಮವನ್ನು ತ್ಯಜಿಸಿ ಹೊರಟು ಹೋಗಿದ್ದಳು. ಇವಳನ್ನು ಹುಡುಕಿಕೊಂಡು ಬಂದೆನು. ಇವಳು ಸಾಧುವೇಷವನ್ನು ತಾಳಿರುವುದರಿಂದ ಸಮಯೋಚಿತವಾಗಿ ನಡೆದುಕೊಂಡು, ಇವಳನ್ನು ನನ್ನಂತೆ ಮಾಡಿಕೊಳ್ಳುವೆನು.

ರಾಗ—ಮಾಳವಗೌಳ. ತಾಳ—ಏಕ.

(ಪ) ಜಯಗಿರಿಧಾರೆ ಕೃಷ್ಣಮುರಾರೆ ಜಯರಾಧಾಪತೆ ವಿಮಲ ಮತೆ ॥

(ಅ) ಯಾದವ ವಂಶಪಯೋನಿಧಿಚಂದ್ರಾ ಯಮಳಾರ್ಜುನತರು ಭಂಜನೋಪೇಂದ್ರಾ ।

ಮಾಧವ ಮಾಮವವಿನತವಿಧೀಂದ್ರಾ ಮಾಯಾತೀತಾಕರುಣಾ ಸಾಂದ್ರಾ ॥

**ವಿಶಾಲಾ**—ಆಹಾ ! ನನ್ನ ಪುಣ್ಯೋದಯದಿಂದ ನಿರ್ಜನವಾದ ಈ ಘೋರ ಕಾನನದಲ್ಲಿ ಕೃಷ್ಣಪರಮಾತ್ಮನ ಸಾಮೋಚ್ಚಾರಣೆಯಿಂದ ನನಗೆ

ಆನಂದವನ್ನೀಯುತ್ತ ಸಾಧುಗಳು ದಯಮಾಡಿಸಿರುವರು (ಬಂದು ನಮಸ್ಕರಿಸುವಳು).

ಸಾಧು—ಪರಮಸುಖಿಭವ. (ಹರಸುವನು).

ವಿಾರಾ—ಸ್ವಾಮಿಾ, ಈ ಕಾಡಿನಲ್ಲಿ ನನಗೆ ದರ್ಶನವಿತ್ತು ನನ್ನನ್ನು ಪಾವನ ಮಾಡಿದಿರಿ. ಎಲ್ಲಿಂದ ದಯಮಾಡಿಸೋಣವಾಯಿತು ?

ಸಾಧು—ಗುಣವತಿಯೆ, ನಾನು ಅನೇಕ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಕ್ಲಾಂತನಾಗಿ ಬಂದೆನು. ಈ ಸ್ಥಳವು ಅನುಕೂಲವಾಗಿ ಕಂಡು ಬಂದುದರಿಂದ ಸ್ವಲ್ಪ ವಿಶ್ರಮಿಸಿಕೊಂಡು ಹೋಗಬೇಕೆಂದು ನಿಂತೆನು.

ವಿಾರಾ—ಧನ್ಯಳಾದೆನು. ಮಹಾನುಭಾವ, ತಾವು ಇಲ್ಲಿ ಕುಳಿತು ವಿಶ್ರಮಿಸಿಕೊಳ್ಳೋಣವಾಗಲಿ. ನಾನು ಉಪಚರಿಸುವೆನು.

ಸಾಧು—ಆಗಬಹುದು. ಜಯರಾಧಾಪತೆ ! (ಕುಳಿತುಕೊಳ್ಳುವನು. ವಿಾರಾ ಗಾಳಿಬೀಸುವಳು).

ವಿಾರಾ—ಸ್ವಾಮಿ, ತಾವು ಅನೇಕ ಪುಣ್ಯಕ್ಷೇತ್ರಗಳಲ್ಲಿ ಸಂಚರಿಸಿ ಬಂದಿರೆಂದು ಹೇಳಿದಿರಿ. ಯಾವ ಯಾವ ಕ್ಷೇತ್ರಗಳಲ್ಲಿ ಸಂಚರಿಸಿದಿರಿ ? ಅಲ್ಲಿ ಯಾವ ಯಾವ ವಿಶೇಷಗಳನ್ನು ಕಂಡಿರುವಿರಿ ? ದಯವಿಟ್ಟು ತಿಳಿಸಬೇಕೆಂದು ಪ್ರಾರ್ಥಿಸುವೆನು.

ಸಾಧು—ಸೌಭಾಗ್ಯವತಿಯೆ, ಹೇಳುವೆನು ಕೇಳು ? ಶಿವಗಿರಿಗೆ ಹೋಗಿದ್ದೆನು. ಅಲ್ಲಿ ಪರಮೇಶ್ವರನು ಪಾರ್ವತಿಯನ್ನು ಪ್ರೀತಿಯಿಂದ ಆಲಿಂಗನ ಮಾಡಿಕೊಂಡಿದ್ದನು. ಅಲ್ಲಿಂದ ಪದ್ಮಭವನಕ್ಕೆ ಹೋದೆನು. ಅಲ್ಲಿಬ್ರಹ್ಮನು ಸರಸ್ವತಿಯೊಂದಿಗೆ ಸರಸವಿನೋದದಲ್ಲಿದ್ದನು. ಅಲ್ಲಿಂದ ಹರಿಪುರಕ್ಕೆ ಹೋದೆನು. ಅಲ್ಲಿ ವಿಷ್ಣುವು ಶ್ರೀ ಭೂದೇವಿಯರನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಪರಸ್ಪರ ಪ್ರೇಮಾವಲೋಕನದಿಂದ ವಿಲಾಸವನ್ನು ಬೀರುತ್ತಲಿದ್ದನು. ಅಲ್ಲಿಂದ ಗೋಕುಲಕ್ಕೆ ಹೋದೆನು. ಅಲ್ಲಿ ಶ್ರೀಕೃಷ್ಣನು ಸಂಮು

ದಿತನಾಗಿ ಗೋಪಸ್ತ್ರೀಯರೊಡನೆ ವಿಹರಿಸುತ್ತಲಿದ್ದನು. ಅಲ್ಲಿಂದ ಮಾನಸ ಸರಸ್ಸಿಗೆ ಹೋದೆನು. ಅಲ್ಲಿ ಮನ್ಮಥನು ರತಿಯೊಡನೆ ಹಂಸರೂಪದಿಂದ ರಮಿಸುತ್ತಲಿದ್ದನು. ಹೀಗೆ ನಾನು ಎಲ್ಲಿ ನೋಡಿದರೂ ಮದನಸಾಂಬ್ರಾಜ್ಯವೇ ಶೋಭಿಸುತ್ತಲಿತ್ತು.

ಮಾರಾ—ನಾನು ನಿಜವಾಗಿಯೂ ಸಾಧುವಿನ ಬಾಯಿಯಲ್ಲಿ ಈ ಮಾತುಗಳನ್ನು ಕೇಳಿದೆನೆ ? ಅಯ್ಯೋ ಪಾಪ, ಬಹಳವಾಗಿ ಸಂಚರಿಸಿ ಮಾರ್ಗಾಯಾಸದಿಂದ ಬುದ್ಧಿಭ್ರಮಣೆಯಾಗಿರಬೇಕು. ಸ್ವಾಮಿ, ತಾವು ಹೇಳುವದು ಸೂಕ್ತವಾಗಿ ಕಾಣುವದಿಲ್ಲ. ತಾವು ಮೊದಲು ವಿಶ್ರಮಿಸಿಕೊಳ್ಳಬೇಕು. ಅನಂತರ ವಿಚಾರಿಸುವೆನು.

ಸಾಧು—ನೀನಿರುವಾಗ ನನಗೆ ಶ್ರಮವೆಲ್ಲಿಯದು. ಬುದ್ಧಿಪೂರ್ವಕವಾಗಿಯೇ ಈ ಮಾತುಗಳನ್ನು ಹೇಳಿದೆನು. ಪೂರ್ವಪುಣ್ಯಪರಿಪಾಕದಿಂದ ಲಬ್ಧವಾದ ತಮ್ಮ ನವಯೌವನಾದಿಗಳನ್ನು ವ್ಯರ್ಥವಾಗಿ ಕಳೆಯದೆ, ಇಂದ್ರಿಯಶಕ್ತಿಯು ಅಡಗುವದಕ್ಕೆ ಮುಂಚೆಯೆ, ಸ್ತ್ರೀ ಪುರುಷರು ಸಂಪೂರ್ಣಾನುರಾಗದಿಂದ ಸೇರಿ ಸುಖಿಸುವದನ್ನು ನೋಡಿ ಸಂತುಷ್ಟನಾದೆನು. ಲೋಕದಲ್ಲಿ ಕಾಮಸುಖಕ್ಕಿಂತಲೂ ಉತ್ಕೃಷ್ಟವಾದ ಸುಖವನ್ನು ನಾನು ಕಾಣೆನು. ಅದೇ ಸಾಲೋಕ್ಯವು. ಅದೇ ಸಾಮೀಪ್ಯವು. ಅದೇ ಸಾಯುಜ್ಯವು.

ಮಾರಾ—(ಕಿವಿಗಳನ್ನು ಮುಚ್ಚಿಕೊಂಡು) ಏನು ಕೇಳಿದೆನು. ಯಾವ ಎರಡಕ್ಷರಗಳು ಕಾಮಾದಿ ವಿಕಾರಗಳನ್ನು ದೂರಮಾಡಿ ಚಿತ್ತಚಾಂಚಲ್ಯವನ್ನು ಸ್ಥಿಮಿತಗೊಳಿಸಿದವೆಂದು ತಿಳಿದಿದ್ದೆನೊ, ಯಾವ ಎರಡಕ್ಷರಗಳು ಐಹಿಕವೆಂಬ ಬಿರುಗಾಳಿಯಿಂದ ಅಳ್ಳಾಡಿಸಲಶಕ್ಯವಾದ ಶಾಂತಶೈಲವೆಂದು ಭಾವಿಸಿದ್ದೆನೊ, ಯಾವ ಎರಡಕ್ಷರಗಳು ಭವರೋಗ ನಿವಾರಣೆಗೆ ಪರಮೌಷಧವೆಂದು ನಂಬಿದ್ದೆನೊ, ಆ ಪವಿತ್ರವಾದ, ಆ ನಿರ್ಮಲ ಸತ್ವಗುಣಾತ್ಮಕವಾದ, ಆ ಪಾವನ ಸಾಧುಸ್ವರೂಪವಾದ, ಸಾಧು ಎಂಬ ಎರಡಕ್ಷರಗಳು ಈಗ ಅಪವಿತ್ರವಾಗಿ ಮಾಡಲ್ಪಟ್ಟವೆ ?

ಸಾಧು— ಕಂದ|| ಕಾಮಿನಿಯೋ ಸಾಮಜವರ ।
ಗಾಮಿನಿಯೋ ಕಾಮಸೌಖ್ಯ ಸೌಧಾಮಿನಿಯೋ ||
ಭಾಮಿನಿಯೋ ನಿನ್ನಂಮಿಗೆ ||
ಕಾಮಿಸಿಹೆಂ ಸ್ಮರಶರಹತಿಯಿಂ ಸಲಹೆನ್ನಂ ||

ಮೀರಾ—ಅಲ್ಲ. ಎಂದಿಗೂ ಅಲ್ಲ. ಸಮೀಪದಲ್ಲಿರುವ ಅಮೋಘವಾದ ಕಸ್ತೂರಿಯ ಗುಣವನ್ನು ಗಾರ್ದಭವು ತಿಳಿಯದ ಮಾತ್ರಕ್ಕೆ ಕಸ್ತೂರಿಯ ಗುಣವು ಹೋಗುವದೆ? ಸಾಧು ಎಂಬ ಎರಡಕ್ಷರ ಗಳ ಮಹಿಮೆಯನ್ನು ತಿಳಿಯಲಾರದ ಈತನೇ ಮೂಢನು, ಅಧ ಮನು.

ಸಾಧು—ಓಹೊ, ನೀನು ಬಹುವಾಗಿ ಪ್ರಸಂಗ ಮಾಡಲುಪಕ್ರಮಿಸಿರುವೆ. ಸುಮ್ಮನೆ ನಿನ್ನೊಂದಿಗೆ ಮಾತನಾಡುವದರಿಂದ ಪ್ರಯೋಜನವಿಲ್ಲ. ನಾನು ಹೇಳಿದಂತೆ ನಡೆದುಕೊ? (ಹಿಡಿದುಕೊಳ್ಳಲು ಹೋಗು ವನು).

ಮೀರಾ—ಹೇ ಕೃಷ್ಣಾ! ಹೃದಯಕಮಲವಾಸ! ನೀನು ನನ್ನನ್ನು ಎಷ್ಟು ವಿಧದಿಂದ ಪರೀಕ್ಷಿಸುವೆ? ದೇವ, ನೀನಲ್ಲದೆ ನನಗಿನ್ನಾರು ಗತಿ? ರಕ್ಷಿಸು, ರಕ್ಷಿಸು.

(ಕೃಷ್ಣಪರಮಾತ್ಮನ ಮಾಯೆಯಿಂದ ಮೀರಾವು ಮಾಯವಾಗು ವಳು. ಸಾಧುವು ಹುಡುಕುವನು. ನಾಲ್ಕಾರು ಗಿಡಗಳ ಕೆಳಗೆ ಪ್ರತ್ಯೇಕ ಪ್ರತ್ಯೇಕವಾಗಿ ಮೀರಾಬಾಯಿಯರು ಕಾಣಿಸುವರು. ಸಾಧುವು ಓಡಾಡಿ ಕ್ಲಾಂತನಾಗುವನು. ಒಂದೇ ತಡವೆಗೆ ಅನೇಕ ಮೀರಾಬಾಯಿಯರು ಕಾ ಣಿಸುವರು. ಸಾಧುವಿಗೆ ಜ್ಞಾನೋದಯವಾಗುವುದು. ಮೀರಾಬಾಯಿಗೆ ನಮಸ್ಕರಿಸಿ ಕ್ಷಮಾಪಣೆಯನ್ನು ಬೇಡುವನು).

ಸಾಧು—ತಾಯೆ, ಪತಿವ್ರತೆಯರ ಪ್ರಭಾವವನ್ನು ಎಷ್ಟೆಂದು ಹೇಳುವುದಕ್ಕೆ ಸಾಧ್ಯವು. ಲೋಪಾಮುದ್ರೆಯನ್ನು ಕೆಣಕಿ ಶಿವನು ದುಃಖಕ್ಕೀ ಡಾದನು. ಸೀತಾದೇವಿಯನ್ನು ಕದ್ದೊಯ್ದು ರಾವಣನ ವಂಶವೇ ನಿರ್ಮೂಲವಾಯಿತು. ಅನಸೂಯೆಯನ್ನು ಪರೀಕ್ಷಿಸಲೆಳಸಿ ಹರಿ

ಹರಬ್ರಹ್ಮಾದಿಗಳು ಶೋಚನೀಯವಾದ ಅವಸ್ಥಾಂತರವನ್ನು ತಾಳಬೆ ಕಾಯಿತು. ಅಲ್ಲದೆ, ಬ್ರಾಹ್ಮಣಿಯೆಂಬಾಕೆಯು ಶಿಲೆಯಾಗಿದ್ದ ಗಂಡನನ್ನು ಕಾಪಾಡಿಕೊಂಡಳು. ಸಾವಿತ್ರಿಯು ತನ್ನ ಪತಿಯ ಜೀವವನ್ನು ಪುನಃ ಯಮಧರ್ಮನಿಂದ ಪಡೆದುಕೊಂಡಳು. ತಾಯೆ, ಇವುಗಳೆಲ್ಲವನ್ನೂ ತಿಳಿದಿದ್ದರೂ, ಮೌಢ್ಯದಿಂದ ತಮ್ಮಲ್ಲಿ ಅಪರಾಧವನ್ನು ಮಾಡಿದೆನು. ನನ್ನನ್ನು ಕ್ಷಮಿಸಿ ರಕ್ಷಿಸಬೇಕು.

ವಿಶಾ—ನಿನ್ನ ಅಪರಾಧವನ್ನು ನಾನು ಕ್ಷಮಿಸಿರುವೆನು. ಯೋಗಾನಂದ ಮುನಿಗಳ ಬಳಿಗೆ ಹೋಗಿ ಅವರ ಕ್ಷಮಾಪಣೆಯನ್ನು ಕೇಳಿಕೊ? (ಇಬ್ಬರೂ ಹೋಗುವರು).

(ತೆರೆಯು ಬೀಳುವುದು).

---

## ೭ ನೇ ರಂಗ.

(ಬೃಂದಾವನದಲ್ಲಿ ಒಂದು ಕುಟೀರದಲ್ಲಿ ಚಮೇಲಿಯು ಕೃಷ್ಣಪೂಜೆಗೆ ಪುಷ್ಪಾದಿ ಪೂಜಾದ್ರವ್ಯಗಳನ್ನು ಅಣಿಮಾಡುತ್ತ ಯಶೋಧರಪಂಡಿತನು ಪ್ರವೇಶಿಸುವನು. ಒಂದು ಮಣೆ, ಹೂವು, ಹಣ್ಣು, ಕಾಯಿ, ದೀವಿಗೆ ಹಚ್ಚಿಡುವದು ಇತ್ಯಾದಿ ಮಾಡುತ್ತಿರುವನು).

ಚಮೇಲಿ—(“ಪಂಡಿತನಾದರೇನು” ಎಂಬ ಹಾಡನ್ನು ಹಾಡುತ್ತ ಪ್ರವೇಶಿಸುವಳು. ಪಂಡಿತನನ್ನು ನೋಡಿ ಹಾಡು ನಿಲ್ಲಿಸಿ, ನಸುನಗುತ್ತ) ಪಂಡಿತರೇ, ಇದೇನು ನೀವು ಮಾಡುತ್ತಿರುವದು?

ಪಂಡಿತ—ಚಮೇಲಿ, ನಾನು ಮೊದಲು ಶೈವನಾಗಿದ್ದೆನು. ಶೈವಮತಕ್ಕನುಸಾರವಾಗಿ ಉದ್ಧಾಮಗ್ರಂಥಗಳನ್ನು ರಚಿಸಿ ಕೀರ್ತಿಯನ್ನು ಪಡೆದೆನು. ಅನಂತರ ನಿನಗೋಸ್ಕರ ವೈಷ್ಣವಮತವನ್ನವಲಂಬಿಸಿ ವೈಷ್ಣವ ಮತಪ್ರಚಾರಕ ಮಹದ್ಗ್ರಂಥಗಳನ್ನು ವಿರಚಿಸಲುಜ್ಜುಗಿಸಿದೆನು. ಅಷ್ಟರಲ್ಲಿ ನೀನು ನನ್ನನ್ನು ಬಿಟ್ಟು ಪರಮಾತ್ಮನ ಮೇಲೆ ದೃಷ್ಟಿಯಿಟ್ಟುದುದರಿಂದ ಈಗ ದೇವಿಯ ಪ್ರಸನ್ನತೆಗಾಗಿ ಶಾಕ್ತೇಯನಾಗಿರುವೆನು. ಪರಮಾತ್ಮನು ಈ ಶಕ್ತಿಯ ಮೇಲೆ ತನ್ನ

ಕರುಣಾದೃಷ್ಟಿಯನ್ನು ತೋರಿದರೆ, ಶಕ್ತಿಯು ನನ್ನ ಮೇಲೆ ತನ್ನ ಕರುಣಾದೃಷ್ಟಿಯನ್ನು ಬೀರುವಳೆಂದು ನಾನು ಉಭಯ ಪೂಜೆಗಳನ್ನೂ ಏಕಕಾಲದಲ್ಲಿ ನೆರವೇರಿಸುತ್ತಲಿದ್ದೇನೆ.

ಚಮೇಲಿ—ಚನ್ನಾಯಿತು. ಹೀಗೆ ಪೂಜೆಮಾಡಿದರೆ ಯಾವ ದೇವರಿಗೆ ತಾನೆ ಒಪ್ಪುವುದಕ್ಕೆ ಸಾಧ್ಯವಾಗುವದು ? ಉರಿಯುವ ದೀವಿಗೆಯ ಮೇಲೆ ಪುಷ್ಪಸರವನ್ನು ಹಾಕುವದುಂಟೆ ? ಸೀದುಹೋಗುವ ದಿಲ್ಲವೆ ?

ಪಂಡಿತ—ನಿನ್ನಂಥ ವಿದ್ವಾಂಸಳಿಗೆ ನಾನು ಮಾಡಿರುವ ಈ ಉಪಮೆಯು ಅರ್ಥವಾಗಲಿಲ್ಲವೆ ?

ಚಮೇಲಿ—ಇಲ್ಲ.

ಪಂಡಿತ—ಪ್ರೇಮವೆಂಬ ಜ್ವಾಲೆಯಲ್ಲಿ ನನ್ನ ಹೃದಯವು ಸಿಕ್ಕಿಹೋಗಿದೆ, ಕೂಡಲೆ ರಕ್ಷಿಸದಿದ್ದರ ಈ ಪುಷ್ಪಸರದಹಾಗೆ ಸೀದು ಹೋಗುವ ದು, ಎಂಬರ್ಥವು ನಿನಗೆ ಬೋಧೆಯಾಗಲೆಂದು ಹೀಗೆ ಮಾಡಿದೆನು.

ಚಮೇಲಿ—ಈಗ ಅರ್ಥವಾಯಿತು.

ಪಂಡಿತ—ಅರ್ಥವಾದಮೇಲೂ ತಟಸ್ಥಭಾವವೇಕೆ ?

ಚಮೇಲಿ—ಅದಿರಲಿ ಪಂಡಿತರೆ, ನಿಮ್ಮ ಸಂಭಾವನೆಗೆ ಮಣ್ಣು ಹಾಕಿಬಿಟ್ಟು ಬಂದಿರಿ, ಶ್ರೋತ್ರಿಯನು ಉದ್ಯೋಗಕ್ಕೆ ಪಾತ್ರನಲ್ಲವೆನ್ನುತ್ತಿರುವಾಗ ನಿಮಗೆ ಪುನಃ ಜೀವನವೃತ್ತಿ ದೊರೆಯುವದೆಲ್ಲಿ ? ಒಂದು ವೇಳೆ, ಇನ್ನೇನು ತಿಳಿದುಕೊಳ್ಳಬೇಡಿ, ಒಂದುವೇಳೆ ಕನಿಷ್ಟಪಕ್ಷ, ನೀವು ನನ್ನನ್ನು ವಿವಾಹ ಮಾಡಿಕೊಂಡರೆ ನಮ್ಮ ಜೀವನ ನಡೆಯುವದು ಹೇಗೆ ? ಉಪಾದಾನವೆ ಉಪಾಯವೋ ?

ಪಂಡಿತ—ಇದೇನು ಹೀಗೆ ಹೇಳುವೆ ? ಧೀಶೂನ್ಯನ ಆಳ್ವಿಕೆಗಿಂತಲೂ ಧೀಶಾಲಿಯ ಊಳಿಗವೇ ಮೇಲಲ್ಲವೆ ? ನನ್ನಂತಹ ಶ್ರೋತ್ರಿಯನಿಗೆ ಸಂಪಾದನೆಯ ಮಾರ್ಗಕ್ಕೇನು ಕಷ್ಟವು. ಕ್ಷಮೆಯನ್ನು ಆಶ್ರಯಿಸಿದರೆ ಶ್ರಮವಿಲ್ಲದೆ ಸುಖವಾಗುವದು.

ಚಮೇಲಿ—ಸರಿ ಸರಿ, ನೀವು ಕ್ಷಮೆಯನ್ನು ಆಶ್ರಯಿಸಿ ಮೂಗು ಹಿಡಿದುಕೊಂಡು ಕುಳಿತರೆ ನನ್ನ ಕಣ್ಣು ನೆಪ್ಪಗೆ ಆಗುವದು.

**ಪಂಡಿತ**—ಕ್ರೌರ್ಯ ಪಕ್ಷಿಮೃಗಗಳು ಹೇಗೆ ಒಂದಾಗುವದಿಲ್ಲವೋ ಹಾಗೆ ಸ್ತ್ರೀಯರ ನಾಲಿಗೆಯೂ ಬುದ್ಧಿಯೂ ಒಂದಾಗುವದಿಲ್ಲ. ಒಂದು ಚುರುಕು, ಒಂದು ಜಡಸ್ವಭಾವ.

**ಚಮೇಲಿ**—ನೀವು ಹೀಗೆ ತರ್ಕಮಾಡಿದ್ದರಿಂದಲೇ ನಾನು ಶೈವಮತಖಂಡನೆಯನ್ನು ಆದಿನ ಸುಲಭವಾಗಿ ಮಾಡಿಬಿಟ್ಟೆನು ನಿಮ್ಮನ್ನು ನೋಡಿದರೆ ನಿಜವಾಗಿಯೂ ನನ್ನನ್ನು ಗೆಲ್ಲುವ ಸಾಮರ್ಥ್ಯವು ನಿಮಗಿಲ್ಲ.

**ಪಂಡಿತ**—ಆದಕ್ಕೇನೆ ಶಕ್ತಿಪೂಜೆಯನ್ನು ಮಾಡುತ್ತಿದ್ದೇನೆಂದು ಹೇಳದೆನು. ಗೆಲ್ಲದಿದ್ದರೂ ಬಲಿಸಿಕೊಳ್ಳೋಣ. (ತೆರೆಯಲ್ಲಿ ಗಾನವಾಗುವದು).

**ಚಮೇಲಿ**—ಓಹೋ, ಹೊತ್ತು ಮೀರುತ್ತಲಿರುವದು. ಉಪವನದಲ್ಲಿ ರಾಧಾಕೃಷ್ಣರಿಗೆ ಈ ದಿನ ಮಹಾ ಉತ್ಸವ. ದೇಶದೇಶದಿಂದ ಭಕ್ತಳಗಳು ಬರುವರು. ಪಂಡಿತರೆ, ನಡೆಯಿರಿ ನಾವು ಹೋಗೋಣ.

**ಪಂಡಿತ**—ಆಗಬಹುದು. (ಹೋಗುವರು).

ತೆರೆಯು ಬೀಳುವದು.

---

## ೮ ನೇ ರಂಗ.

(ಬೃಂದಾವನದ ಮಾರ್ಗದಲ್ಲಿ ಯಾತ್ರಾರ್ಥಿಗಳು ತಂಡೋಪತಂಡವಾಗಿ ಬರುತ್ತಿರುವರು).

ಬೈರಾಗಿಗಳು — (ಪ್ರವೇಶಿಸಿ).

ರಾಗ—ಆರಭಿ. ತಾಳ—ಏಕ.

(ಪ) ಜಯರಾಧಾಪತೆ ಜಯಗಿರಿಧಾರೀ ।
ಜಯವಿಮಲಮತೇ ಜಯ ದನುಜಾರೀ ॥

(ಅ) ಯದುಕುಲದೀಪಾ ಬರ್ಹಕಲಾಪಾ ।
ಮೋಹನರೂಪಾ ಗಂಧವಿಲೇಪಾ ॥

(ಚ) ಫಣಿಪತಿಶಯನಾ ಖಗಪತಿಗಮನಾ ।
ಪಶುಪತಿಸುಹೃದಾ ಗಜಪತಿವರದಾ ॥ (ಹೋಗುವರು).

ವ್ರಜನಿತೆಯರು—(ತಲೆಯಮೇಲೆ ಹಾಲು ಚೊಂಬುಗಳನ್ನಿಟ್ಟುಕೊಂಡು ಪ್ರವೇಶಿಸುವರು).

ರಾಗ—ಹಿಂದೂಸ್ಥಾನಿ ತೋಡಿ. ತಾಳ—ಏಕ.

(ಪ) ಬಾರೆಬಾರೆನೀರೆ ಸಾರಿಪ್ರೋಗಿ ನೋಡುವ ।
ಜಾರನ ನವನೀತಚೋರನ ಗೋವರ್ಧನಧರನ ॥

(ಅ) ಮಾರಜನಕ ಮಾರಸುಂದರ ಮಾರಮಾರಸಖ ।
ಮಾರಮಾರಮಣ ಸರಸಿಯೊಳು ಗೋಪಿಯರ ಸೀರೆಗಳ ನೊಯ್ದವನ ॥ (ಹೋಗುವರು).

ಗುರುಕುಲವಾಸದವರು—(ಪ್ರವೇಶಿಸಿ).

ಜೈಜೈ ಮಿನಶರೀರಾ ನಿಗಮೋದ್ಧಾರಾ ।
ಜೈಜೈ ಮಂದರಗಿರಿಧರ ಕಮಠಾಕಾರಾ ॥
ಜೈಜೈ ವರಾಹರೂಪಾ ಜಗತೀಪಾಲಾ ।
ಜೈಜೈ ಬಾಲಕಪ್ರೋಷಾ ನರಹರಿಲೀಲಾ ॥
ಜೈಜೈ ತ್ರಿವಿಕ್ರಮಾ ವರವಾಮನನಾಮಾ ।
ಜೈಜೈ ಕ್ಷತ್ರಿಯದಮನಾ ಭಾರ್ಗವರಾಮಾ ॥
ಜೈಜೈ ಶ್ರೀರಘುವೀರಾ ಸತ್ಯಧುರೀಣಾ ।
ಜೈಜೈ ಶ್ರೀಕೃಷ್ಣಾ ಭಕ್ತಪರಾಧೀನಾ ॥
ಜೈಜೈ ಶ್ರೀಬೌದ್ಧಾತ್ಮ ಧರ್ಮಸಪ್ರೋಷಾ ॥
ಜೈಜೈ ಲೀಲಾಕಲ್ಕೀ ದುರಿತವಿನಾಶಾ ॥
ಜೈಜೈ ವೈಕುಂಠನಿವಾಸಾ ನಾರಾಯಣ ।
ಜೈಜೈ ಹರಿನಾರಾಯಣ ಹರಿನಾರಾಯಣ ॥ (ಹೋಗುವರು).

(ಕಾಷಾಯುದುಡಪನ್ನು ಧರಿಸಿ ಕುಂಭನು ಪ್ರವೇಶಿಸುವನು).

ಕುಂಭ— ರಾಗ—ಮುಂದಾರಿ. ತಾಳ—ಛಾಪು.

(ಪ) ನಾರಿಗೆ ದೋಷವನು ಆರೋಪಿಸಿ ಕೆಟ್ಟೆನು ॥

(ಅ) ಪೂರ್ವಾಪರಗಳ ಪರ್ಯಾಲೋಚಿಸದೆ ಘೋರಪಾತಕಿಯಾದೆ
ಧಾರಿಣಿತಲದೊಳು ॥

ಇನ್ನು ನನಗೆ ಸಿರಿಸಂಪತ್ತಿನಿಂದೇನು ? ರಾಜಪದವಿಯೇ ಮೊದಲಾದ ವೈಭವಗಳಿಂದೇನು ಪ್ರಯೋಜನ ? ಸರ್ವಶ್ರೇಷ್ಠಳೂ, ಪತಿವ್ರತಾ ಶಿರೋಮಣಿಯೂ, ಭಗವದ್ಭಕ್ತಳೂ ಆದ ಮೀರಾವಿನಲ್ಲಿ ಘೋರವಾದ ದೋಷವನ್ನೆಣಿಸಿ ಕಲುಷಾತ್ಮಕನಾದ ನಾನು ಮರಣ ದಂಡನೆಯನ್ನು ವಿಧಿಸಿದ ಮೇಲೆ ನನಗೆ ಯಾವದರಿಂದೇನು ಸುಖವು ? ಸರ್ವವೂ ದುಃಖಮವಾಯಿತು. ದೈವಭಕ್ತರಲ್ಲಿ ದೋಷವನ್ನು ಎಣಿಸಿದವನನ್ನು ದೈವವು ಕೈಬಿಡುವದು. ಸರ್ವರೂ ದೈವವಿದ್ವೇಷಿಯಾದ ಆ ನಿರ್ಭಾಗ್ಯನ ಕೈಬಿಡುವರು. ಪ್ರಹ್ಲಾದನು ತಂದೆಯ ಮೇಲಿನ ಪ್ರೀತಿಯನ್ನು ಬಿಟ್ಟನು. ವಿಭೀಷಣನು ಭ್ರಾತೃವಿನಲ್ಲಿಡಬೇಕಾದ ವಾತ್ಸಲ್ಯವನ್ನು ವಿಸರ್ಜನೆ ಮಾಡಿದನು. ಭರತನು ತಾಯಿಯ ಮೇಲಿನ ಪ್ರೇಮವನ್ನು ತ್ಯಜಿಸಿದನು. ಬಲಿಯು ಗುರುವಿನ ಮೇಲಿನ ಮಮತೆಯನ್ನು ತೊರೆದನು.

ಇನ್ನು ನಾನು ಭೂಮಿಗೆ ಭಾರವಲ್ಲದೆ ಮತ್ತೇನೂ ಕಾಣೆನು ? ನನ್ನಿಂದ ಯಾರಿಗೇನು ಸುಖವು ? ಆ ನನ್ನ ಮೀರಾವಿಗೆ ಪ್ರಿಯವಾಗಿದ್ದ ಈ ಬೃಂದಾವನದಲ್ಲಿ ನನ್ನ ಆಯುಶ್ಶೇಷವನ್ನು ಕಳೆಯುವೆನು. ಕೃಷ್ಣಪರಮಾತ್ಮನಡಿದಾವರೆಯಲ್ಲಿ ನನ್ನ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಪಡೆಯುವೆನು. (ಹೋಗುವನು).

ತೆರೆಯು ಬೀಳುವುದು.

---

೯ ನೇ ರಂಗ.

(ಗೋಕುಲಬೃಂದಾವನ—ಭಕ್ತಾಳುಗಳು ನೆರೆದಿರುವರು ಮಧ್ಯದಲ್ಲಿ ಬೃಂದಾವನವೊಂದು ವಿರಾಜಿಸುತ್ತಿರುವದು).

ಎಲ್ಲರೂ— ರಾಗ—ಜ್ಯೋತಿ. ತಾಳ—ಏಕ.

(ಪ) ಪಾಹಿ ಮಾಧವ ರಾಧಾಪತೆ ॥

(ಅ) ಗೋಪಬಾಲಾ ಗೋಪಾಲಾ ಕನಕಚೇಲಾ ಸುಗುಣಶೀಲಾ
ಬೃಂದಾವನಲೋಲ ಸದಯ ॥ ೧ ॥

ಇಂದುವದನಾ ಕುಂದರದನಾ ಮಂದಗದನಾ ನಂದಸದನಾ ಬೃಂದಾ
ರಕ ವಂದ್ಯಚರಣಾ ॥ ೨ ॥
ರುಚಿರವೇಷಾ ಖಳವಿನಾಶಾ ಸುಜನಪೋಷಾ ಪರಮಪುರುಷಾ
ವೈಕುಂಠನಿವಾಸ ಶ್ರೀಹರೆ ॥ ೩ ॥

(ಮೀರಾಬಾಯಿ ಪ್ರವೇಶಿಸುವಳು).

ಮೀರಾ— ರಾಗ—ಮಾಂಡು. ತಾಳ—ಏಕ.

(ಪ) ತೋರಿದಂತೆಮಾಡು ಗಿರಿಧಾರಿ ಕೋರಿಬಂದಿಹೆನು ॥
(ಅ) ಪರಿಪೂರ್ಣಪ್ರೇಮದೆ ನಿನ್ನ ಚರಣವನಂಬಿಹೆ ಪರಿಪಾಲಿಸಿ
ದರುಸರಿ ಪರಿಹರಿಸಿದರುಸರಿ ॥

ಹೇ ಜಗನ್ನಾಥ, ಇಂದು ಮನಸ್ಸು ಶಾಂತಿಯನ್ನೈದಿತು. ನಿನ್ನ ಚರಣಾರವಿಂದಗಳಲ್ಲಿ ನನ್ನ ಮನಸ್ಸು ಲೀನವಾಗಿ ಈ ದೀನಾತ್ಮವು ಪರಮ ಶಾಂತಿಯನ್ನೈದಿತು. ಕೃಷ್ಣಾ, ನಿನ್ನ ರಾಜ್ಯವು ಪ್ರೇಮವು. ನಿನ್ನ ವಿನೋದವು ಪ್ರೇಮವು. ನೀನೇ ಪ್ರೇಮವು. ಕೃಷ್ಣಾ, ನಿರ್ಮಲವಾದ, ನಿತ್ಯವಾದ ಅನಂತವಾದ, ಈ ನಿನ್ನ ಪ್ರೇಮವು ನಿನ್ನಲ್ಲಿ ಪರಿಶುದ್ಧ ಪ್ರೇಮಭಕ್ತಿಯನ್ನಿಡುವವರಿಗೆ ತಾನೇ ಲಭ್ಯವು. ಹೇ ಕೃಷ್ಣಾ! (ತನ್ಮಯಳಾಗಿ ನಿಂತಿರುವಳು).

ಕುಂಭ—(ಪ್ರವೇಶಿಸಿ) ರಾಗ—ಮುಂದಾರಿ. ತಾಳ—ಛಾಪು.

(ಚ) ಮಾನಿನಿಯುಮಾತನು ಮಾನಿಸದೆ ನಾನೇನನುಗೈದೆ ಜ್ಞಾನಶೂ
ನ್ಯನಾಗಿ ॥ (ನಾರಿಗೆ ದೋಷವನು)

ಮಾಡುವದೇನು? ಆಗಿಹೋಯಿತು. ಘೋರ ವಿಷಪಾನವನ್ನು ಮಾಡಿ ಈ ನನ್ನ ಹೃದಯಕಮಲದಲ್ಲಿದ್ದ ಸುಧಾರಸವನ್ನು ಭಸ್ಮಮಾಡಿಬಿಟ್ಟೆನು ಆ ನಿರ್ಮಲ ಸುಧಾರಸಪಾನವನ್ನು ಮಾಡುತ್ತಲಿದ್ದ ಪರಿಶುದ್ಧಾತ್ಮಕವಾದ ಮೀರಾಮಧುಪವು ನಾಶವಾಗಿ ಹೋಯಿತು. ಇನ್ನು ಈ ದೇಹವು ಶುಷ್ಕವು. ಇನ್ನು ಈ ಜೀವವು ಶುಷ್ಕವು. ಇನ್ನು ಸರ್ವತ್ರದಲ್ಲಿಯೂ ನಾನು ಶುಷ್ಕನು. ಇನ್ನು ಈ ಭೂಮಿಯು ಮೇಲೆ ನಾನು ಬದುಕಿರುವದರಿಂದಾಗುವ ಫಲವೇನು? ಮೀರಾ! ಮೀರಾ!! ಮೀರಾ!!!

(ಸುತ್ತಲೂ ನೋಡುತ್ತ ತನ್ಮಯಳಾಗಿರುವ ಮೀರಾವನ್ನು ನೋಡು

ವನು). ಇದೊ ನನ್ನ ವಿಜಾರಾ? ಅಲ್ಲ. ಇದೇನು ಕನಸೊ? ಕಳವಳ ವ್ರೊ? ದುಃಖದಿಂದ ಉಬ್ಬಾಗಿರುವ ಮನಸ್ಸಿನ ಭ್ರಾಂತಿಯೊ? ನನಗೆ ಬುದ್ಧಿಯು ವಿಪರೀತವಾಗಿ ಹೋಗಿರಬೇಕು. ಮಹಾ ಪತಿವ್ರತೆಯಾದ ನನ್ನ ವಿಜಾರಾವಿನ ವಿಜ್ಞಾಪನೆಯನ್ನು ಮೌಢ್ಯದಿಂದ ಲಾಲಿಸದೆ ಕ್ರೂರ ದಂಡನೆಯನ್ನು ಅಂದು ವಿಧಿಸಿದೆನು ನನ್ನ ಆಜ್ಞೆಯನ್ನು ಎಂದೂ ಉಲ್ಲಂ ಘಿಸದ ಆ ನಾರೀಶಿರೋಮಣಿಯು ಅಂದೇ ಈ ಲೋಕವನ್ನು ಬಿಟ್ಟಳು. ನನ್ನಂತಹ ಕಲುಷಾತ್ಮಕನಿಗೆ ಇನ್ನು ಎಲ್ಲಿ ಆ ಅಮೋಘವಾದ ವಸ್ತುವು ದೊರಿಯುವದು (ಹಾಗೆಯೇ ನೋಡುತ್ತ) ಅದೇ ಮೊಗವು. ಅದೇ ನಿಮಿಾ ಲಿತ ನೇತ್ರಗಳು. ಅದೇ ದೈವಿಕವಾದ ವರ್ಚಸ್ಸು. ಚಿತ್ರಾರ್ಪಿತ ಪ್ರತಿ ಮೆಯೊ? ಇಲ್ಲ ನಿಜವ್ರೊ?

ವಿಜಾರಾ—(ತನ್ಮಯತ್ವದಲ್ಲೀ) ಹೇ ಜಗನ್ನಾಥ, ಹೇ ಪ್ರಭೊ, ಏನು ಹೇಳ ಲಿ? ಸತೀತ್ವಭಂಗಕ್ಕೆ ಮರಣವೇ ದಂಡನೆಯೆಂದೂ ನನ್ನ ಪ್ರಾಣ ವನ್ನು ನಾನೇ ನೀಗಬೇಕೆಂದೂ ಆರ್ಯಪುತ್ರನು ಅಪ್ಪಣೆ ಮಾಡಿ ದನು. ಪತಿಯೇ ಪರದೈವವೆಂದು ನಂಬಿ, ತ್ರಿಕರಣಪೂರ್ವಕ ವಾಗಿ ಪತಿಸೇವೆಯನ್ನು ಮಾಡುತ್ತ ಅನ್ಯಥಾ ನೆನೆಯದ ನಾನು ಪತಿಯ ಆಜ್ಞೆಯನ್ನು ಶಿರಸಾವಹಿಸಿ, ಆ ಆಜ್ಞಾಸಾಧನೆಗೋ ಸ್ಕರ ಯಮುನೆಯಲ್ಲಿ ಬಿದ್ದೆನು.

ಕುಂಭ—(ಸ್ವಗತ) ಇವಳೇ ನಿಜವಾಗಿಯೂ ನನ್ನ ವಿಜಾರಾ. ನಾನು ಇವ ಳಗೆ ದುಃಖವನ್ನಿತ್ತ ಪಾಪಿಯು.

ವಿಜಾರಾ—ಹೇ ಭಕ್ತವತ್ಸಲಾ, ಯಮುನೆಯಲ್ಲಿ ಬಿದ್ದ ನನ್ನನ್ನು ನೀನೇ ರಕ್ಷಿಸಿ ತಟವನ್ನೈದಿಸಿದೆ? ಹೆಜನಾರ್ದನಾ, ನೀನೇ ಗಂಗೋತ್ತರೆ ಯಿಂದ ಯೋಗಾನಂದ ಮುನೀಶ್ವರರನ್ನು ಕಳುಹಿಸಿ ನನಗೆ ಪರಮ ವೈರಾಗ್ಯವನ್ನು ಬೋಧಿಸಿದೆ? ಪರೀಕ್ಷೆಯಿಂದ ಅದನ್ನು ದೃಢಪಡಿ ಸಿದ? ಹೇ ವಾಸುದೇವ, ನೀನೇ ಐಹಿಕ ದುಃಖಗಳಿಂದ ಪರಿತಪ್ತ ವಾದ ಈ ಜೀವಕ್ಕೆ ಭಕ್ತಿಯೋಗವನ್ನರುಹಿ ಅನಂತ ಶಾಂತಿಯ ನ್ನಿತ್ತೆ? ಭಾಗವತೋತ್ತಮರೂ, ಮಹಾಮುನಿವರ್ಯರೂ, ಫಣಿರಾಜನೂ, ಕಡೆಗೆ ವೇದಗಳೂ ಸಹಾ ಈ ಅನಂತವಾದ, ಈ

ಅವೋಘವಾದ, ಈ ಅವ್ಯಾಜ ಕರುಣೆಯೆಂದೆನಿಸುವ ನಿನ್ನ ಮಹಿಮಾತಿಶಯವನ್ನು ತಿಳಿದು ಹೇಳಲು ಅಸಾಧ್ಯವಾಗಿರುವಲ್ಲಿ, ಕೇವಲ ಅಬಲೆಯಾದ ನಾನು ತಿಳಿದು ಹೇಳಬಲ್ಲೆನೆ? ಹೇ ಕೃಷ್ಣಾ! (ಕಣ್ದೆರೆಯುವಳು).

ಕುಂಭ—ನಿಜವಾಗಿಯೂ ಇವಳೇ ನನ್ನ ವಿಜಾ, (ಸಮೀಪಕ್ಕೆ ಹೋಗ ಲೆತ್ನಿಸಿ) ಪರಮಪಾತಕಿಯಾದ ನಾನು ಇವಳನ್ನು ಹೇಗೆ ಮಾತನಾಡಿಸಲಿ. ಈ ನೀಚನನ್ನು ಇವಳು ಕ್ಷಮಿಸುವಳೇ? ಕ್ಷಮಿಸಬೇಕೇ? ಹಾ ವಿಜಾ! ವಿಜಾ!! (ಮೂರ್ಛಿತನಾಗಿ ಬೀಳುವನು).

ವಿಜಾ—(ನೋಡಿ) ಇದೇನು ಆರ್ಯಪುತ್ರನು ಇಲ್ಲಿ? (ಬೇಗಬಂದು ಶೈತ್ಯೋಪಚಾರವನ್ನು ಮಾಡುವಳು).

ಕುಂಭ—(ಕಣ್ದೆರೆದು) ವಿಜಾ, ಈ ಪಾಪಾತ್ಮನನ್ನು ಕ್ಷಮಿಸುವೆಯಾ? ನಿಜವಾಗಿಯೂ ಕ್ಷಮಿಸುವೆಯಾ?

ವಿಜಾ—ಆರ್ಯಪುತ್ರ? ಕ್ಷಮಿಸುವದಕ್ಕೆ ತಮ್ಮಲ್ಲೇನು ಅಪರಾಧವು? ನನ್ನ ಕರ್ಮಫಲವನ್ನು ನಾನು ಅನುಭವಿಸಿದೆನು. ಅದಕ್ಕೆ ತಾವೇನು ಮಾಡುವದಕ್ಕಾಗುವದು?

ಕುಂಭ—(ಕೈಹಿಡಿದುಕೊಂಡು ಮೇಲಕ್ಕೆದ್ದು) ವಿಜಾ, ಇಂದು ಧನ್ಯನಾದೆನು. ಈ ಜನ್ಮವು ಸಾರ್ಥಕವಾಯಿತು.

ಅಕ—(ಪ್ರವೇಶಿಸಿ ವಿಜಾಬಾಯಿಗೆ ನಮಸ್ಕರಿಸಿ) ಮಾತಾಯಿಯವರ ಕಷ್ಟಕ್ಕೆ ಕಾರಣನಾದ ನನ್ನನ್ನು ಕ್ಷಮಿಸಬೇಕು.

ವಿಜಾ—ಸಾರ್ವಭೌಮ, ನಿಮ್ಮಲ್ಲೇನು ತಪ್ಪು ಏನಿರುವದು? ನಿನ್ನ ಸಚ್ಚರಿತವೇ ನಿನ್ನನ್ನು ಕಾಪಾಡುವದು.

ಅಕ—ರಾಣಾಜಿ, ನಿಮ್ಮ ನೇಮಾತವು ನನಗೆ ಬೇಡ. ನೀವು ಆ ದಿನ ಬಿಟ್ಟುಹೋದ ರಾಜ್ಯವನ್ನು ನಿಮಗಾಗಿ ನಿಮ್ಮ ಅಮಾತ್ಯರಲ್ಲೇ ನಿಲ್ಲಿಸಿದೆನು. ಇನ್ನು ಮೇಲೆ ಸರ್ವ ದುಃಖವೂ ಸುಖದಲ್ಲಿ ಪರಿಣಮಿಸಿರುವದ್ದರಿಂದ ನಿಮ್ಮ ರಾಜ್ಯವನ್ನ ನೀವೇ ನಿರಂಕುಶ ಪ್ರಭುತ್ವದಿಂದ ಆಳಿರಿ. ನಿಮ್ಮಗಳೊಡನೆ ನಿರ್ಮಲ ಮೈತ್ರಿಯೊಂದಿದ್ದರೆ ಕೃತಾರ್ಥನಾಗುವೆನು. (ಇಬ್ಬರೂ ಸ್ನೇಹಭಾವದಿಂದ ಕೈಕುಲುಕುವರು).

ವಿನಾರಾ—ಸಕಲಸುಖಾನುಭವಕ್ಕೂ ಕಾರಣವಾದ ಈ ಕೃಷ್ಣ ಪರಮಾತ್ಮ ನನ್ನು ಕುರಿತು ಭಜಿಸೋಣ. (ಮುಕುಂದಮಾಲೆಯ ಶ್ಲೋ ವನ್ನು ಹಾಡುವಳು).

ಶ್ಲೋ॥ ಜಯತು ಜಯತುದೇವೋ ದೇವಕೀ ನಂದನೋಯಂ ।
ಜಯತು ಜಯತು ಕೃಷ್ಣೋವೃಷ್ಣಿವಂಶಪ್ರದೀಪಃ ॥
ಜಯತು ಜಯತು ಮೇಘಶ್ಯಾಮಲಃ ಕೋಮಲಾಂಗೋ ।
ಜಯತು ಜಯತು ಪೃಥ್ವೀಭಾರನಾಶೋ ಮುಕುಂದಃ ॥

ರಾಗ—ಸುರಟಿ. ತಾಳ—ಏಕ.

(ಪ) ನಮಾಮಿ ಶ್ರೀಮುಕುಂದ ಶ್ರೀಹರೇ ॥
(ಚ) ಉಮೇಶವಿನುತನಾಮವಿಮಲ ।
ಯಮೀಂದ್ರ ವಂದ್ಯಪಾದಕಮಲ ।
ರಮೇಶ ದೀನದಯಾಪರಾ ।
ತ್ವಮೇಹಿ ದಾಸ್ಯಂದೇಹಿ ಮಾಂಪಾಹಿ ॥

(ಗೋಪಕನ್ಯೆಯರ ಸಮೇತ ರಾಧಾಕೃಷ್ಣರು ಬಿಜಯುವ ಬೃಂದಾ ವನದ ಮಧ್ಯದಲ್ಲಿ ಪ್ರತ್ಯಕ್ಷರಾಗುವರು. ಗೋಪಕನ್ಯೆಯರು ಮಂಗಳವ ನ್ನು ಹಾಡುತ್ತ ಕೃಷ್ಣಾವತಾರದ ನಾಟ್ಯವನ್ನಾಡುವರು).

ಗೋಪಕನ್ಯೆಯರು—

ರಾಗ—ಭೀಮ'ಪಲಾಸ'. ತಾಳ—ಏಕ.

(ಪ) ಮಂಗಳಂ ಜಯಮಂಗಳಂ ಶ್ರೀ ರಾಧಾಮುಕುಂದರಿಗೆ ॥
(ಅ) ವೇದವಿನುತ ಮುರಳೀನಾದ ಭೇದವಿನೋದ ಪಂಕಜಸುಪಾದ ಶ್ರೀಧರ ।
ಕೃಷ್ಣಮುರಾರಿಗೆ ರಾಧಾಸತಿಗೆ ॥

(ಎಂದು ಹಾಡುತ್ತಾ ಶ್ರೀ ರಾಧಾಕೃಷ್ಣರ ಸುತ್ತಲೂ ರಾಸಕ್ರೀಡೆ ಯನ್ನು ತೋರಿಸುವರು).

ತೆರೆಯು ಬೀಳುವದು.

ದ್ವಿತಿಯಾಂಕ ಸಂಪೂರ್ಣಂ.

**ಸಮಾಪ್ತಂ.**